DO YOU BELIEVE THAT THE BEST IN QUALITY
IS THE MOST ECONOMICAL ?

If so for your requirements in Patent Medicines, Hospital requisites, Medicinal Toilets, Infant foods etc.

**You can always**

## *Dial 3070 or 2870*



ಪಾಪ್ಯುಲರ್ ಫಾರ್ಮಸಿ
ಹೋಲ್‌ಸೇಲ್ & ರಿಟೇಲ್
ಔಷಧಿ ವ್ಯಾಪಾರಿಗಳು
ಸುಬೇದಾರ ಛತ್ರಂ ರೋಡ್, ಬೆಂ.ಸಿ.
ಫೋನ್ 3070

ಬ್ರಾಂಚ್
6ನೇ ಕ್ರಾಸ ರೋಡ
ಮಲ್ಲೇಶ್ವರಂ. ಫೋನ್ 2870



CALL AT

# Popular Pharmacy

(On the approved list of Govt. of Mysore)

***Wholesale & Retail Chemists & Druggists***

(NEAR MOVIELAND TALKIES)

**Subedar Chattram Road : : Bangalore City**




*Branch at :*

**6th CROSS, SAMPIGE ROAD,
MALLESWARAM,**

**Phone: 2870**

# ಬುದ್ಧಿಯ ಪ್ರಶ್ನೆಗಳು

| ಪ್ರಶ್ನೆ | ಉತ್ತರ | ವಿರಾಮ |
|---|---|---|
| ರಾಮು | ಸೀತೆ | ೧ ಸೆಕೆಂಡ್ |
| ಶ್ಯಾಮು | ಸುಂದರ | ೧ ಸೆಕೆಂಡ್ |
| ಕಾಮು | ಹಬ್ಬ | ೨ ಸೆಕೆಂಡ್ |
| ಕ್ಷಾಮು | ಕಾಳಸಂತೆ | ೨ ಸೆಕೆಂಡ್ |
| ಕ್ಷೌರ | ತೆರಿಗೆ | ೨ ಸೆಕೆಂಡ್ |
| ರಚ್ಚೆ | ರಂಪ | ೨ ಸೆಕೆಂಡ್ |
| ಕುಚ್ಚು | ಜಡೆ | ೧ ಸೆಕೆಂಡ್ |
| ಸ್ವಿಚ್ಚು | ಎಂ.ಇ.ಐ. | ೦ ಸೆಕೆಂಡ್ |

**ಸ್ವಿಚ್ಚು ಅನ್ನುತ್ತಿದ್ದಹಾಗೆ ಎಂ. ಇ. ಐ ರವರ ಜ್ಞಾಪಕ ಯಾಕೆ ಬರುತ್ತೆ ಗೊತ್ತೆ?**

ಹೊರಗಿನವರೊಡನೆ ಗುಣಕ್ಕಾಗಿ ಪೈಪೋಟಿ ಮಾಡಬಲ್ಲ ಎಲ್ಲಾ ತರಹ ಸ್ವಿಚ್ಚುಗಳೂ, ನಮ್ಮ ಕರ್ಣಾಟಕದ ಕೇಂದ್ರದಂತಿರುವ ಬೆಂಗಳೂರಿನಲ್ಲೇ ನಮ್ಮವರಿಂದಲೇ ತಯಾರಾಗುತ್ತಿವೆ.



ಪ್ರಚುರ ಪಡಿಸಿದವರು:

**ಐ. ಎ. ಇ. ಸಿ.**

**ಸಿಲ್ವರ್ ಜ್ಯೂಬಿಲಿ ಪಾರ್ಕ್ ರಸ್ತೆ,**

**- ಬೆಂಗಳೂರು -**

K. A. S.

## ಸಮಯವರಿತು ಸಲಹೆ ಸೂಚಿಸಿದರೆ ಶುಭ





ಅಂದಹಾಗೇ "ಪೂರ್ಣಿಮಾ" ಸಿಲ್ಕ್ ಹೌಸ್‌ಗೆ
ನಾಳೆ ಹೋಗಿ ಹಬ್ಬಕ್ಕೆ ಅಣಿಮಾಡೋಣ
—— ಅಂದ್ರೇ ! ——



# ಪೂರ್ಣಿಮಾ ಸಿಲ್ಕ್ ಹೌಸ್

ಚಿಕ್ಕಪೇಟೆ : : ಬೆಂಗಳೂರು ಸಿಟಿ K.A S.











ಚಾಮುಂಡಿ ವನಸ್ಪತಿ

ರೇಡಿಯೋ ರಿಫೈನ್ಡ್ ಆಯಿಲ್




ನಂದಿ ವನಸ್ಪತಿ



ಮೈ-ವಾಷ್ ವಾಷಿಂಗ್ ಸಾಬೂನು

**ದಿ ಮೈಸೂರು ವೆಜಿಟಬಲ್ ಆಯಿಲ್ ಪ್ರಾಡಕ್ಟ್ಸ್, ಲಿ.,**

ಬೆಂಗಳೂರು — ಮದರಾಸು.

MVP-22 KN




## ಮೊದಲ ಮಾತು

ಪ್ರಿಯ ಓದುಗರೇ !

ಖರನಾಮ ಸಂವತ್ಸರದ ಯುಗಾದಿಯಂದು, ನೀವು ನಿಮ್ಮವರನ್ನೊಡಗೂಡಿ, ಇದ್ದುದನ್ನು ಸಂತುಷ್ಟಿಯಾಗಿ ತಿಂದು ತೇಗುವ ಹೊತ್ತಿಗೆ, ಕೊರವಂಜಿಯು ಹಬ್ಬದ ಸೀರೆ ಉಟ್ಟು, 'ನಗು ಮೊಗದ ಕನ್ನಡಂ ಗೆಲ್ಗೆ' ಎಂದು ಪಲ್ಲವಿ ಹಾಡುತ್ತಾ, ನಿಮ್ಮನ್ನು ನಗಿಸಲು ಕಣಿ ಹೇಳುತ್ತಾ ಬಂದಿದ್ದಾಳೆ. ಅನ್ತಃಪುರದ ಗೀತೆ, ಹಾಗೂ ಚಿತ್ರಗಳನ್ನು ನೋಡಿ, ಹಳ್ಳಿಯ ಕೊರವಂಜಿ ಬೆಪ್ಪು ಬೆರಗಾಗಿ ಕಲ್ಲಾಗಿ ರಕ್ಷಾ ಪತ್ರದ ಮೇಲೆ ನಿಲ್ಲಲು ಯತ್ನಿಸಿದ್ದಾಳೆ. ಅವಳೊಂದಿಗೆ ಅಥವಾ ಅವಳನ್ನು ನೋಡಿ ನಗಿ. ಪುಕ್ಕ ತರೆದುಕೊಂಡರೂ ಅವಳೇನೂ ಕುಣಿಯುವುದನ್ನು ಬಿಡುವಹಾಗಿಲ್ಲ—ಈ ವರ್ಷ—.

ಕೊರವಂಜಿಯು ಕಣಿಗೆ ಹಿಮ್ಮೇಳ ಕೊಡುತ್ತಿರುವ ಲೇಖಕ ವರ್ಗದವರಿಗೂ, ಅಚ್ಚೊತ್ತಿಕೊಟ್ಟ ಶ್ರೀ ಬಿ. ಎಸ್. ಐಯ್ಯಂಗಾರ್ ಮತ್ತು ಪುತ್ರರಿಗೂ, ಶ್ರೀ ಡಿ. ಎಲ್. ಹೊಸಾಳಿಯವರಿಗೂ, ವ್ಯಂಗ್ಯ ಚಿತ್ರಗಳನ್ನು ಬರೆದುಕೊಟ್ಟ ಶ್ರೀ ಆರಗಂ, ಅನಂತಯ್ಯ, ಕುಕ್ಕೆ, ನಾಡಿಗ್ ಇವರುಗಳಿಗೂ, ಶ್ರೀ ಸುಬ್ಬರಾಯರ ನೇತೃತ್ವದಲ್ಲಿ ದುಡಿದ ವ್ಯವಸ್ಥಾಪಕ ವರ್ಗದವರಿಗೂ ನಮ್ಮ ಧನ್ಯವಾದಗಳು.

ಜಾಹೀರಾತುದಾರರು ಇಂದಿನ ಸನ್ನಿವೇಶದಲ್ಲಿ ಪತ್ರಿಕೆಗಳ ಬೆನ್ ಬಲ. ನಾವು ಕೊಟ್ಟ ಕಿರುಕುಳಗಳನ್ನು ಕುಚಗುಳಿಯೆಂದಂದುಕೊಂಡು ನಾವಿತ್ತ

ಸಲಹೆಗಳಿಗೆ ಮನ್ನಣೆಇತ್ತು, ನಮಗೆ ಪೋಷಕರಾದ ಜಾಹೀರಾತುದಾರರಿಗೆಲ್ಲ ನಮ್ಮ ವಂದನೆಗಳು. ಹಲವು ಜಾಹೀರಾತುಗಳನ್ನು ಕೊರವಂಜಿಯ ರೀತಿಯಲ್ಲಿ ಪ್ರಚುರಪಡಿಸಿದ್ದೇವೆ. ಹಲವನ್ನು ಬೇರೆ ರೀತಿಯಲ್ಲಿ ಪ್ರಚುರಪಡಿಸಿದ್ದೇವೆ. ನಿಮ್ಮ ಅಭಿಪ್ರಾಯ, ಮೆಚ್ಚುಗೆ ತಿಳಿಯಲೋಸುಗ ಒಂದು ಪ್ರಯೋಗವನ್ನು ನಡೆಸಿದ್ದೇವೆ. ವಿವರಗಳಿಗೆ ೯೯ನೇ ಪುಟವನ್ನು ನೋಡಿ. ಹಬ್ಬದ ಸಾಯಂಕಾಲ ನೀವು ಈ ಸ್ಪರ್ಧೆಯಲ್ಲಿ ಭಾಗವಹಿಸಿ ೫೦ ರೂಪಾಯಿ ಬಹುಮಾನ ಪಡೆಯಿರಿ—ಹಾಗೂ ಹಬ್ಬದ ದಿನ ಮನೆಯಲ್ಲೇ ಮಡದಿ ಮಕ್ಕಳೊಂದಿಗೆ ಕಾಲ ಕಳೆಯಲು ಇದೂ ಒಂದು ನೆಪವಾಗಲೀ !

ಇಷ್ಟು ಬೆಲ್ಲದ ಮಾತಾಯಿತು.

ಇನ್ನು ಬೇವಿನ ಭಾಗ. ಕಾಗದದ ಬೆಲೆ ಅತ್ಯಧಿಕವಾಗಿದೆ. "ಏನಾಯ್ತು ! ಇದ್ದ ಕಾಗದದಲ್ಲೆಲ್ಲಾ 'ನೋಟು'ಗಳನ್ನು ಅಚ್ಚೊತ್ತುತ್ತಿದ್ದಾರೆಯೇ ?" ಎಂದು ಕುಹಕವಾಡುವಷ್ಟಾಗಿದೆ ಮಿಕ್ಕೆಲ್ಲಾ ಖರ್ಚುಗಳೂ ಒಂದಕ್ಕೆ ಮೂರರಷ್ಟಾಗಿದೆ. ಆದರೂ ಕೊರವಂಜಿಯು ಈ ವರ್ಷ ಮೊದಲಿನಂತೆಯೇ ತನ್ನ ಸೇವೆ ಮಾಡಲು ನಿಶ್ಚಯಿಸಿದ್ದಾಳೆ. ಓದುಗರು ಒಬ್ಬರಿಗೆ ಹತ್ತಂತೆ ಆದರೆ ಈ ಸೇವೆ ಸಾಧ್ಯವಾಗಬಹುದು. ದಯೆಯಿಟ್ಟು ಸಹಕರಿಸುತ್ತೀರಾ? ಹಬ್ಬದ ದಿನ 'ಹ್ಞೂ' ಎನ್ನಿ.

ಈ ಜನ್ಮದಿನ ಸಂಚಿಕೆಯನ್ನು ನಮ್ಮ ಚಂದಾದಾರರಿಗೆ ಹಬ್ಬದ ಉಡುಗೆರೆಯಾಗಿ ಕಳಿಸಿದ್ದೇವೆ. ಸಂಚಿಕೆಯ ಖರ್ಚು ಹೆಚ್ಚಾದ್ದರಿಂದ, ಸಂಚಿಕೆಯೂ ಹನ್ನೆಡರ ಹೊರತಾದ ವಿಶೇಷ ಸಂಚಿಕೆಯಾದ್ದರಿಂದ, ಕೊರವಂಜಿಯ ಆರ್ಥಿಕ ಸ್ಥಿತಿ, ಸರಕಾರದ ಸ್ಥಿತಿಯಾದ್ದರಿಂದ, ಈ ಉಡುಗೆರೆಗೆ ನೀವೇ ಒಂದು ತೆರಿಗೆ ಕೊಡುವಿರಾ ? ಈ ಸಂಚಿಕೆ ನಿಮಗೆ ಸ್ವಲ್ಪ ಸುಖ ಕೊಟ್ಟಿದ್ದರೆ, ಒಮ್ಮೆ ನಗುವಂತೆ ಮಾಡಿದ್ದರೆ, ಇದರ ಮರ್ಮ ಏನು ಎಂದು ಒಮ್ಮೆ ಪಲುಕಿಸಿದ್ದರೆ, ನಿಮಗೆ ತೋರಿದ, ಇಷ್ಟಬಂದ, ಆಶೀರ್ವಾದ ರೂಪವಾದ ತೆರಿಗೆಯನ್ನು ಕಳಿಸಿಕೊಡಿ—ಅದು ನಿಮ್ಮ ಹಬ್ಬದ ಸುಖದ ಇಂಗಿತವಾಗಿರಲಿ.

ಪ್ರಾರ್ಥನೆಯಲ್ಲಿ ಕೊರವಂಜಿಗೆ ಬಲುನಂಬಿಕೆ. ಆದಕ್ಕೇ ಅವಳು ಮಾದೇವನಲ್ಲಿ ಮಣಿದು ದೈನ್ಯದಿಂದ ಪ್ರಾರ್ಥಿಸುತ್ತಾಳೆ. "ಖರ ಸಂವತ್ಸರದಲ್ಲಿ ದಿನ ದಿನವೂ ಹಬ್ಬದಂತೆ ನಮ್ಮ ಓದುಗರೂ, ಪ್ರಿಯರೂ ಕಾಲ ಕಳೆಯುವಂತಾಗಲೀ" ಎಂದು.

ಸಮಸ್ತರಿಗೂ ಶುಭಾಶಯಗಳು.

—ಸಂಪಾದಕ.

———o———

# ಕುಹಕಿಡಿಗಳು

—

"ಉಗಾದೀಗೆ ಉಗುಳು ನೀರು" ಅಂತ ಸ್ನೇಹಿತ ಹೇಳಿದ ಗಾದೆ ಕೇಳಿದವ 'ಹ್ಞೂ' ಅಂತ ದೂರ ಸರಿದನಂತೆ.

*　　　*　　　*

ಜ|| ಮೆಕಾರ್ತರ್ ಸೈನ್ಯದ ಹಿಂಬದಿಯಲ್ಲೇ ವೈದ್ಯ ದಳವಿರುವುದರಿಂದ ಸೈನಿಕರು ಮುನ್ನುಗ್ಗಿ ಹೋಗಲು ಉತ್ತೇಜನ ಕೊಟ್ಟಂತಾಗುತ್ತೆ ಅಲ್ಲವೇ!

*　　　*　　　*

ಇನ್ನೊಂದು ಡಿಸ್ಟ್ರಿಕ್ಟಿನಲ್ಲಿ ಪಾನನಿರೋಧ ಶುರುವಾಗುತ್ತೆ ಅಂತ ಸುದ್ದಿ. ಯಾವ ಡಿಸ್ಟ್ರಿಕ್ಟ್ ಇರಬಹುದು? (ಪ್ರಶ್ನೆ)

*　　　*　　　*

ಆ ಡಿಸ್ಟ್ರಿಕ್ಟಿನ ಅಧಿಕಾರಿಗಳು ತುರ್ತಾಗಿ ವರ್ಗಮಾಡಿಸಿಕೊಂಡರಲ್ಲವೇ ಯಾವುದು ಡಿಸ್ಟ್ರಿಕ್ಟ್ ಅಂತ ಬೇಗ ತಿಳಿಯೋದು!

*　　　*　　　*

"ಈಗ ಮದುವೇಗೆ ಕರೆಯೋಕ್ಕೆ ಬರೋರು, ಅಕ್ಷತೆ ಅಕ್ಕಿ ಕೂಡಾ ಕೊಡೋಲ್ಲ. ಕೊಟ್ಟರೆ, ಆ ಅಕ್ಕಿಕಾಳಿನಲ್ಲಿ ಅನ್ನ ಮಾಡಬಹುದು" ಎಂದೊಬ್ಬರು ಬರೆದಿದ್ದಾರೆ.

*　　　*　　　*

ಜ|| ಜಫರುಲ್ಲಾ ಖಾನರ ಇತ್ತೀಚಿನ ಗೆಲುವನ್ನು ನೋಡಿ, ಅಮೇರಿಕಾ ಮುಖಂಡರು ಆತನನ್ನೇ ತಮ್ಮ ನ್ಯಾಯ ಸಲಹೆಗಾರನನ್ನಾಗಿ ನೇಮಕಮಾಡಿ ಕೊಳ್ಳುತ್ತಾರೆ ಯೂನೋದಲ್ಲಿ ಎಂಬುವುದು ಇನ್ನೂ ಖಚಿತವಲ್ಲವಂತೆ.

*　　　*　　　*

ಶ್ರೀಯುತ ಧರ್ಮಸಾಗರ ಲಕ್ಷ್ಮೀಪುತ್ರ, ಕುಬೇರ ಗೋತ್ರೋದ್ಭವರು ಸತ್ತಾಗ ಕೇವಲ ಹಲವು ಲಾಯರುಗಳು ಮಾತ್ರ ಇದ್ದರಂತೆ ಹತ್ತಿರದಲ್ಲಿ.

*　　　*　　　*

ಸೋಮನಾಥ ದೇವಾಲಯದ ರತ್ನ ಖಚಿತ (ಮಹಮ್ಮದ್ ಘಜ್ನಿ ಹಾರಿಸಿ ಕೊಂಡು ಹೋಗಿದ್ದ) ಮಹಾದ್ವಾರವನ್ನು ಈಗ ಅಫ಼ರ್ಘ ಸರ್ಕಾರವು ಭಾರತಕ್ಕೆ ಮೈತ್ರಿಯ ಗುರುತಾಗಿ ವಾಪಸು ಕೊಡುತ್ತದಂತೆ.

—ರತ್ನಗಳೆಲ್ಲವೂ ಮಾಯವಾಗಿದ್ದರೂ ಮಹಾದ್ವಾರ ಹಾಗೆಯೇ ಇದೆಯಂತೆ.

*　　　　*　　　　*

ಪ್ರಸವ ಸಂಕಟ ಸ್ತ್ರೀಗೆ ಮಾತ್ರವಲ್ಲ. ಆ ಸಮಯದಲ್ಲಿ ಅವರ ಗಂಡಂದಿರೂ ಹಲ್ಲು ನೋವು, ಹೊಟ್ಟೆನೋವಿನಿಂದ ನರಳುತ್ತಾರೆ. (ಪತ್ರಿಕೆ)

—ಅದಕ್ಕೇ ನೋಡಿ, ಕೆಲವು ಗಂಡಂದಿರು ಬಾಣಂತನ ಮಾಡಿಕೊಳ್ಳುತ್ತಾರೆ—ಬ್ರಾಂದಿ ಕುಡಿದು.

*　　　　*　　　　*

ಈ ಬಸ್ 'ಕ್ಯೂ'ಗಳ ಅಂಚಿನಲ್ಲೇ ಒಬ್ಬಾತ 'ಏಸ್ಟ್ರಿ' ಮಾತ್ರೆ ಮಾರುತ್ತಾ, ಮಾರುತ್ತಾ, ಈಗ ಎರಡಂತಸ್ತಿನ ಮನೆ ಕಟ್ಟಿಸಿದ್ದಾನೆ.

*　　　　*　　　　*

"ಎಲೆಯ ಮೇಲೇ ಕಣ್ಣಿರಲಿ" (ಉಪದೇಶ ಇಸ್ಪೀಟಿನವ)

—ಆಹಾ! ಇಲ್ಲದಿದ್ದರೆ ಹೋಟಲಿನಲ್ಲಿ ಪಕ್ಕದವ ನಮ್ಮ ಅನ್ನ ಹಾರಿಸಿ ಬಿಡುತ್ತಾನೆ.

*　　　　*　　　　*

ಪರೀಕ್ಷಾ ಸಮಯದಲ್ಲಿ ಪ್ರಶ್ನೆಗಳನ್ನು ಹುಡುಕುವುದು ಅಷ್ಟು ಸುಲಭವಲ್ಲ. (ಹೇಳಿಕೆ)

—ಇದನ್ನೋದಿದಾಗ ಶ್ರೀ ಎಚ್. ವಿ. ಕಾಮತ್‌ರವರು ನಕ್ಕರಂತೆ.

*　　　　*　　　　*

ಗುಪ್ತ ವ್ಯಾಧಿಗಳಿಂದ ಏಕೆ ನರಳುವಿರಿ? ಇಂದೇ ನಮಗೆ ಪತ್ರ ಬರೆಯಿರಿ. (ಜಾಹೀರಾತು)

—ತಂತಿ ಕೊಟ್ಟರೆ ಬೇಗ ವಾಸಿಯಾಗುತ್ತಲ್ಲವೇ?

*　　　　*　　　　*

ಮನಿಯಾರ್ಡರ್ ಫಾರಂನ ಬರೆದ ಮೇಲೆ ಒತ್ತೋ ಕಾಗದ ಸಿಗಲಿಲ್ಲ. (ಪತ್ರ)

—ಯಾಕೆ! ಇನ್ನೊಂದು ಮನಿಆರ್ಡರ್ ಫಾರಂನಿಂದ ಒತ್ತಬಹುದಾಗಿತ್ತಲ್ಲ!

---

# ಉರಿಗಾಳು

ಮಂತ್ರಿಗಳೊಬ್ಬರು ತಮ್ಮ ಹುಟ್ಟಿದ ದಿನದಂದು ತಮ್ಮ ಮಾತೋಶ್ರೀಯವರಿಗೆ ಅಭಿನಂದನಾ ಪತ್ರವನ್ನು ಕಳುಹಿಸಿದರಂತೆ.

* * *

ಎಂಟು ವರ್ಷಗಳಿಂದಲೂ ನಾನು ಈ ಕೊಡೆಯನ್ನು ಹಿಡಿದು ತಿರುಗಾಡುತ್ತಿದೇನೆ—ಎಂದು ಮಹಾಶಯರೊಬ್ಬರು ಹೇಳುತ್ತಿದಾರೆ....ಅದನ್ನು ಅವರು ಈಗಲಾದರೂ ಹಿಂದಕ್ಕೆ ಕೊಡಲೇ ಬೇಕು.

* * *

ತಾನು ಭಾಷಣ ಮಾಡುವ ಹಾಲ್‌ನಲ್ಲಿ ಕ್ಯಾಲೆಂಡರೊಂದನ್ನು ತೂಗಿ ಹಾಕಿದ್ದು ತನಗೆ ಅವಮಾನ ಎಂದು ಹೇಳಿ ರಾಜಕೀಯ ನಾಯಕರೊಬ್ಬರು ಸಭಾತ್ಯಾಗ ಮಾಡಿದರಂತೆ.

* * *

"ಅವನೊಬ್ಬ ಮಂಕ; ನನಗೂ ಅವನಿಗೂ ನಂಟತನ ಎಂದು ಅವನು ಊರೂರಲ್ಲೂ ಹೇಳಿಕೊಂಡು ತಿರುಗುತ್ತಿದಾನೆ" ಎಂದು ಸರ್ಕಾರಿ ಅಧಿಕಾರಿಗಳೊಬ್ಬರು ರೇಗಿದರಂತೆ.....ನಂಟತನಕ್ಕೆ ಅದೊಂದೇ ರುಜುವಾತು ಸಾಕು, ಎಂದು ಜನ ತಿಳಿದಿರಬೇಕು.

* * *

ನಂಟರನ್ನು ಕಳೆದುಕೊಳ್ಳುವುದೆಂದರೆ ತುಂಬಾ ಶೋಚನೀಯ ಎಂದು ಒಬ್ಬರು ಗೋಳಾಡಿದರೆ, ಅವರ ಸ್ನೇಹಿತರು, "ಶೋಚನೀಯ? ಅಸಾಧ್ಯ, ಎನ್ನು" ಎಂದರಂತೆ.

* * *

ತಾವು ಸಾಕಿದ ನಾಯಿ ಎಲ್ಲಾದರೂ ತಪ್ಪಿಸಿಕೊಂಡುಬಿಟ್ಟರೆ, ಪರಂಗಿಯವರು ಪತ್ರಿಕೆಗಳಲ್ಲಿ ಪ್ರಕಟಿಸಿ ಅದನ್ನು ಹಿಂದಕ್ಕೆ ಪಡೆಯುತ್ತಾರೆ. (ಲೇಖನ) ನಮ್ಮ ಊರು ನಾಯಿಗಳಿಗೆ ಓದು ಬರುವುದಿಲ್ಲವಲ್ಲಾ.

* * *

ದೊಡ್ಡವನಾದಾಗ ಯಾವ ಉದ್ಯೋಗ ಮಾಡುತ್ತೀರಿ ಎಂಬ ಪ್ರಶ್ನೆಗೆ ಒಬ್ಬ ವಿದ್ಯಾರ್ಥಿ, "ನ್ಯಾಯವಾದ ವ್ಯಾಪಾರ" ಎಂದು ಉತ್ತರ ಬರೆದಿರುವನಂತೆ ....ಆ ಉದ್ಯೋಗದಲ್ಲಿ ಮಾತ್ರ ಅವನ ಪೈಪೋಟಿಗೆ ಯಾರೂ ಬರುವಂತಿಲ್ಲ.

* * *

ಆಫೀಸಿನಲ್ಲಿ ಹಾಡುತ್ತ ಫೈಲುಗಳನ್ನು ತಿರುವಿಹಾಕುವ ಸಂಗೀತಪ್ರಿಯ ಅಧಿಕಾರಿಯನ್ನು ಕೆಳ ನೌಕರರು ಸೊಳ್ಳೆ ಎಂದು ಕರೆಯುವುದಕ್ಕೆ ಕಾರಣ ಏನು, ಎಂದು ಇನ್ನೂ ಅವರಿಗೆ ತಿಳಿದಿಲ್ಲವಂತೆ.

* * *

ಮಿಲಿಟರಿ ಕ್ಯಾಂಪೊಂದರಲ್ಲಿ ಅಡಿಗೆಯವನಾಗಿದ್ದ ಒಬ್ಬ ಮೊನ್ನೆ ನಮಗೊಂದು ಪತ್ರ ಬರೆದಿದಾನೆ, "ನನಗೆ ಎರಡುಬಾರಿ ಪಿಸ್ತೂಲ್ ಏಟು ತಗುಲಿದೆ" ಎನ್ನುತ್ತಾನೆ. ಬಂದ ಕೋಪದಲ್ಲಿ ಅವರು ಅವನ ಪ್ರಾಣ ಉಳಿಸಿದ್ದೇ ಪುಣ್ಯ.

* * *

ತಾನು ಒಲಿದ ಹೆಣ್ಣನ್ನು ಮದುವೆಯಾಗದಿದ್ದರೆ ಪ್ರಾಣವೇ ಹಾರಿ ಹೋಗುತ್ತದೆ ಎಂದು ಘೋಷಿಸಿದ ಯುವಕನೊಬ್ಬ, ಮೊನ್ನೆ ತನ್ನ ೯೬ನೆ ವಯಸ್ಸಿನಲ್ಲಿ ಕಾಲವಾದನಂತೆ.

* * *

"ಕಥೆ ಕಟ್ಟುವಾಗ, ನಾವು ಹೇಳುವ ವಿಷಯಗಳಿಗಿಂತ ಹೇಳದೆ ಇರುವ ವಿಷಯಗಳಿಗೆ ಹೆಚ್ಚು ಗಮನ ಕೊಡಬೇಕು; ಬಿಚ್ಚು ಮಾತಿಗಿಂತ ಮುಚ್ಚು ಮಾತೇ ಮುಖ್ಯ" (ಕಥೆಗಾರ) ಆದರೆ, ಮನೆಯಾಕೆ ಅದನ್ನೂ ಪತ್ತೆಮಾಡಿ ಬಿಡುತ್ತಾಳೆ, ಬಹುಬೇಗ.

* * *

"ಇಂಥ ಕೆಟ್ಟ ಮಾತುಗಳನ್ನು ನೀನು ಆಡುವುದನ್ನು ನಿನ್ನ ತಂದೆ ಕೇಳಿದರೆ ಎಷ್ಟು ನೊಂದುಕೊಳ್ಳುತ್ತಾರೊ" ಎಂದು ಮೇಷ್ಟರು ಹೇಳಿದಾಗ, ಹುಡುಗ ಅಂದನಂತೆ, "ನಮ್ಮ ತಂದೆ ಇದನ್ನ ಕೇಳಿದರೆ ಹಿಗ್ಗಿ ಹೀರೇಕಾಯಾಗುತ್ತಾನೆ, ಸಾರ್! ಅವನು ಕಿವುಡ!"

* * *

ಬಾಬಾಬುಡನ್‌ಗಿರಿಗೆ ಹೋದ ನವಕನ್ನಡ ಸಾಹಿತಿ ಒಬ್ಬರು, ಅಲ್ಲಿ ಸಿನಿಮ ಮಂದಿರಗಳಿಲ್ಲವೆಂಬುದು ಪತ್ತೆಯಾಗುತ್ತಲೂ, ಬೆಂಗಳೂರಿಗೇ ಹಿಂತಿರುಗಿದರಂತೆ.

* * *

ಕಾಲೇಜು ಫೀಜನ್ನು ಶೇಕಡ ೨೫ರಷ್ಟು ಹೆಚ್ಚಿಸಿದರೆ ಪಾಠಗಳನ್ನು ಶೇಕಡ ೨೫ರಷ್ಟು ಕಡಮೆ ಮಾಡಲೇ ಬೇಕೆಂದು ವಿದ್ಯಾರ್ಥಿಗಳು ಒತ್ತಾಯಪಡಿಸುವರಂತೆ.

* * *

ದಶರಥ ಎಂಬ ಚಲನಚಿತ್ರದಲ್ಲಿ ದಶರಥ ಸಾಯುವ ದೃಶ್ಯದಲ್ಲಿ ಜೀವಕಳೆ ಸಾಲದೆಂದು ವಿಮರ್ಶಕರು ಅಭಿಪ್ರಾಯಪಟ್ಟಿರುವರು.

---

# ಹೈದ ಹಾಡ್ತವ್ನೆ

– ೧ –

ಈ ಹೈದನ್ಹಿತ್ಲಲ್ಲಿ ಏನಿರ್ಲಿ ಇರದಿರ್ಲಿ
ಊವಾ ಒಂದ್ ಅರಳಿರ್ಲಿ—
ನನ್ಹಟ್ಟ ಒಳಗೆಲ್ಲ ಏನಿರ್ಲಿ ಇರದಿರ್ಲಿ
ನಗುವೊಂದು ತುಂಬಿರ್ಲಿ.

– ೨ –

ಮೃಷ್ಟಾನ್ನ ಹೊಡೆದಿರ್ಲಿ, ಮುದ್ದೇನೇ ತಿಂದಿರ್ಲಿ
ಕಾಸಿರಲಿ ಇರದಿರ್ಲಿ—
ಮೈಮ್ಯಾಗಿನ್ ಸರಟೆಲ್ಲ ಹರಕ್ಹರಕೆ ಆಗಿರ್ಲಿ
ಪಂಚೇಲಿ ತೂತಿರ್ಲಿ—

– ೩ –

ಭೇಷ್ ಅಂತ ಗೆದ್ದಿರ್ಲಿ, ವಿಾನೆ ಮಣ್ಣಾಗಿರ್ಲಿ
ಜೆಟ್ಟಂತೆ ಮನ್ಸಿರ್ಲಿ—
ಬಯ್ಯೋನು ಬಯ್ತಿರ್ಲಿ. ಹೊಗಳೋಬಾಯ್ಮುಚ್ಚಿರ್ಲಿ
ಎದೆಯೊಂದು ಹಗುರಿರ್ಲಿ.

– ೪ –

ಭುಜದೊಳ್ಗೆ ಉಕ್ಕಿರ್ಲಿ, ನಿಜದೊಳ್ಗೆ ನೆಚ್ಚಿರ್ಲಿ
ಮೊಗದಲ್ಲಿ ನಗುವಿರ್ಲಿ
ನಿಮ್ಮನ್ಕಂಡ್ಹಾನ್ನಕ್ಕೊ ನನ್ಕಂಡು ನೀವ್ನಕ್ಕೊ
ನಗುಬಳ್ಳಿ ಹರವಿರ್ಲಿ.

– ೫ –

ಬೆಲ್ಲ ಬಂದ್ಬಿದ್ದಾಗ ಆಸೆ ತುಸ ತಾಳಿರ್ಲಿ
ಬೇವನ್ಮರೀದಿರ್ಲಿ
ನಾಲ್ಗೇಗೆಟಕೋದೆಲ್ಲ ಬೆಲ್ಲಾಗ್ಲಿ ಬೇವಾಗ್ಲಿ
ತುಟಿಮ್ಯಾಗೆ ನಗುವಿರ್ಲಿ.

—ಎ. ಎಸ್. ರಾಮಕೃಷ್ಣ.



# ಕೊರನನ ಸಿಂಹಾವಲೋಕನ

---

ತಲೆ ಮೇಲಿದ್ದ ಕಪ್ಪು ಟೋಪಿನಾ ಮೇಜಿನ ಮೇಲಕ್ಕೆಸೆದ ಕೊರವ—ಕೈಲಿದ್ದ ದಿನಪತ್ರಿಕೆಯನ್ನು ಮಡಚುತ್ತಾ.

ನಮಗೆ ಗೊತ್ತು—ಹೀಗೆ ಅವ ಪತ್ರಿಕೆಯನ್ನು ಹಿಂಡಿದರೆ ಏನೋ ಹೇಳುತ್ತಾನೆ ಅಂತ.—ನಾವೂ ಅವನ ಕಡೆಗೆ ಮುಖ ತಿರುಗಿಸಿದೆವು.

"ಬದನೇಕಾಯಿ ತಿನ್ನಬೇಡ ಅಂತ ಹೇಳೋದು—ಬದನೇಕಾಯಿ ರಸವಾಂಗಿ ಮೆಲ್ಲೋದು" ಅಂದ.

ಯಾವ ತಾಯಿ ಮಗನಿಗೆ ಇದು ಅರ್ಥವಾಗುತ್ತೆ? ಆ ಅರ್ಥವಾಗದ ಕಳೆ ನಮ್ಮಗಳ ಮೊಗದ ಮೇಲೆ ನೋಡಿ, ಮುಂದುವರಿಸಿದ.

"ಅಲ್ರೀ! ಭಾರತವೆಲ್ಲಾ ಜಾತ್ಯಾತೀತ ದೇಶ ಅಂತ ಹಿಮಾಲಯದ ತುದಿಯಿಂದ ತುತ್ತೂರಿ ಊದುತ್ತಾರೆ. ಆದರೆ ಉಗಾದಿ ಬಂತು ಅಂದರೆ, ರೇಷನ್ ಕಾರ್ಡಿಗೆ ಒಂದು ಪಂಚೆ ಅಂತ ಹಿಂದುಗಳಿಗೆ ಮಾತ್ರ ಹಂಚುತ್ತಾರೆ. ಇದೇನ್ರಿ ನ್ಯಾಯಾ! ನಾನು ನೋಡಿದ ನಮ್ಮ ಮಹಮ್ಮದೀಯರಿಗೆ, ಕ್ರಿಶ್ಚಿಯನ್ನರಿಗೆ ಪಂಚೆ ಇಲ್ಲದೇ ಇದ್ದ'ರೆ ನಿರ್ವಾಣ. ಚೆಳ್ನ ಕಾಣರು, ಇಜಾರದ ಹೆಸರು ಅವರುಗಳು ಕೇಳಿಲ್ಲ! ಅವರಿಗೂ ಕೊಡಬಾರದೆ? ಅದಕ್ಕೇ ನನಗೆ ನಗು" ಎಂದಂದ.

"ಹೌದಾ" ಅಂತ ಮಂಗಳೂರಿನ ಭಾಷೆ ಆಡಿದೆವು.

* * *

ನಮ್ಮ ಕ್ಲಬ್ಬಿನಲ್ಲಿ ಆ ಸಾಯಂಕಾಲ ಬಲು ಶಕೆ. ಪಂಕದ ಕೆಳಗೆ "ಚೀಟಿ" ಆಟ ಆಡಲೂ ಸುಸ್ತು. ನಾನೂ ಕೊರವ ಗಾಳೀ ಸಂಚಾರಕ್ಕೆಂದು ಕಬ್ಬನ ಬನದಲ್ಲಿ ಸುತ್ತಲು ಹೊರಟೆವು. ರಾಜಮಾತೆ ವಿಕ್ಟೋರಿಯಾ ಶಿಲಾ ಪ್ರತಿಮೆಯ ಹತ್ತಿರ ಬಂದೆವು. ಆಕೆಯನ್ನು ತಪ್ಪಾಯ್ತು! ಆ ಶಿಲಾಪ್ರತಿಮೆಯನ್ನು ನೋಡಿದ ಕೊರವ.

ಮೆಟ್ಟಿಲು ಹತ್ತಿರ ಕುಳಿತುಕೊಂಡ.

"ನೋಡು ! ಮಗೂ, ಈ ದಂತ ವೈದ್ಯರೆಲ್ಲರೂ ಬದುಕಿಹೋದರು" ಎಂದ.

"ಎಲಾ ! ಏಕೆ ಹೀಗೆ ಆಡುತ್ತಾನೆ—ಈತ—ತಂಪು ಹೊತ್ತು. ಕ್ಲಬ್ಬಿನಿಂದ ಸೂರ್ಯ ಇರುವಾಗಲೇ ಹೊರಬಿದ್ದಿದ್ದಾನೆ. ಇದರ ಮರ್ಮ ಏನು" ಎಂದು ಯೋಚಿಸತೊಡಗಿದೆ.

ನನ್ನದು ಹಾಲು ಹಸುಳೆ ಮುಖ. ಮನಸ್ಸಿನಲ್ಲಿದ್ದದ್ದು ಮುಖದ ಮೇಲೇ ರೇ ಮಾಯವಾಗುವುದು.

ಆಗಂದ ಕೊರವ. "ಈ ಪ್ರತಿಮೆ ನೋಡಿ ಮದ್ರಾಸಿನ ಆಹಾರ ಸಚಿವರ ಜ್ಞಾಪಕ ಬಂತು. ಆ ರೋಚಿ ವಿಕ್ಟೋರಿಯಾ ಮೊನ್ನೆ ಪ್ರಜಾಪ್ರತಿನಿಧಿ ಸಭೆಯಲ್ಲಿ ಹೇಳಿದ 'ಕೃತಕ ಅಕ್ಕಿ' ಪ್ರಯೋಗ ನಡೆಸುತ್ತಿದ್ದೇವೆ. ಅದು ಸಾರ್ಥಕವಾದರೆ ೭ ಔನ್ಸು ಅಕ್ಕಿಯನ್ನು ಎಂಟು ಮಾಡಬಹುದು" ಅಂತ.

ಕೃತಕ ಅಕ್ಕಿ ತಿನ್ನಬೇಕಾದರೆ, ಅದು ಗಂಟಲಿಳಿಯಬೇಕಾದರೆ, ಅದನ್ನು ಅಗಿಯಲು ಕೃತಕ ದಂತಗಳೇ ಬೇಕಲ್ಲವೇ? ಚಿನ್ನದಂಥಾ ಹುಡುಗಿ ದೊರೆಯಬೇಕಾದರೆ ಚಿನ್ನ ಹೆಚ್ಚಾಗಿ ಬೇಕಲ್ಲವೇ? ಹಾಗೆಯೇ !

ಅದಕ್ಕೇ ಹೇಳಿದ್ದು ದಂತ ವೈದ್ಯರು ಇನ್ನು ಬದುಕಿಹೋದರು" ಅಂತ.

—ನನಗೆ ಖುಷಿಯಾಯಿತು, ಇವನ ವಾದಸರಣಿ ನೋಡಿ—ನನಗೆ ಅಕ್ಕಿ ನಿಷೇಧ ಮಾಡಿದ್ದಾರೆ ನನ್ನ ವೈದ್ಯರು. ನಾನೇನೋ ಸಿಹಿ ಪ್ರಕೃತಿಯವನೆಂದು—

* * *

ಆ ದಿನ ಸಾಯಂಕಾಲ ತಂಗಾಳಿ ಬೀಸುತ್ತಿತ್ತು—ಉಗಾದಿಯ ಮುನ್ಸೂಚನೆ—ಮಧ್ಯಾಹ್ನವೆಲ್ಲಾ ಬಲು ಶಕೆ—ಮುಂದೆ ಮಳೆ ಬೀಳುವ ಸೋಗುಹಾಕಿದ ಮೋಡಗಳು, ಕಾರ್ಮೋಡಗಳು—ವಾರ್ಮೋಡಗಳಲ್ಲ ರಾಜಕಾರಣಿಗಳು ಹೇಳುವಂತೆ—ಅಂದು ಕ್ಲಬ್ಬಿನ ಉಪ್ಪಿಟ್ಟಿಗೇರುಪೊಪ್ಪು ಇಂದ್ರ ತಿನ್ನುತ್ತಿದ್ದಿರ ಬಹುದಾದುದು ಅಂತಹಾ ರಾಜ ರುಚಿ—ಮೆಲ್ಲ ಮೆಲ್ಲಗೆ ಒಂದೊಂದು ಸೇರು ಮುಗಿಸಿದ್ದೆವು. ಗೇರುಪೊಪ್ಪು ಪಿತ್ತಕಾರಿ ಎಂದು ಯಾರೋ ಹೇಳಿದ್ದರಲ್ಲವೇ? ಯಾವಾಗಲೋ ?

ಕೊರವ ತಣ್ಣೀರು ಕುಡಿದ. ನಮ್ಮ ಕಡೆ ತಿರುಗಿದ. ನಾವೆಲ್ಲಾ ಅಲ್ಲಿ, ಇಲ್ಲಿ ಎಲ್ಲಾ, ತಟ್ಟೆಗಳ ಮೇಲೇ ಕಣ್ಣು.

ಸ್ವಲ್ಪ ಕ್ಯಾಕರಿಸಿದ. ಗಂಡನಿಗೆ ಹಸೇ ಮೇಲೆ ಆರತಿ ಎತ್ತೋಕೆ ನಿಂತ ವಧುವಿನಂತೆ—

ಎಲ್ಲರೂ ಬಾಯಿಯನ್ನು ಗೋಡಂಬಿಯ ಮೇಲೆ ಮುಚ್ಚಿ—ಅವನ ಕಡೆ ತಿರುಗಿದೆವು.

"ನಮ್ಮ ಹಿರಿಯರು ಬಲು ಬುದ್ಧಿವಂತರಯ್ಯಾ! ಪೂರ್ಣ ಅನುಭವದ ಮೇಲೆ ನಾಣ್ಣುಡಿಗಳನ್ನು ಮಾಡಿದ್ದಾರೆ" ಅಂದ.

"ಇದ್ದಕ್ಕಿದ್ದ ಹಾಗೇ ನಿನಗೇನು ಬಂತು ಹಿರಿಯರ ಮೇಲೆ ಪ್ರೀತಿ" ಎಂದು ಹುಬ್ಬು ಹಾರಿಸಿದೆವು.

ಆತ ಈ ಸಮಸ್ಯೆಯನ್ನು ವಿಶದೀಕರಿಸಿದ—ಹೀಗೆ—

ಅಲ್ರೀ. ಕಾಶ್ಮೀರ ಈಗ ಎರಡಾಗಿದೆ. ಅದನ್ನು ಒಂದು ಮಾಡಬೇಕು. ಇದಕ್ಕೆ ಯೂನೋ ಯಾರನ್ನು ಮಧ್ಯಸ್ಥಿಕೆಗೆ ಕರೀತಿದ್ದಾರೆ ಗೊತ್ತೆ? ಡಿವಲೇರಾನ ಕರೆಯೋಣವೇ? ಅಂತ ಕೆಲವರು ಯೋಚಿಸುತ್ತಿದ್ದಾರಂತೆ. ಅಲ್ರೀ! ಅವನ ಊರಾದ ಐರ್ಲೆಂಡ್—ಅಲ್ಲಾ—ಐರ್ ಬೇರೇ. 'ರ್' ಬೇರೆ ಆಗಿದೆ. 'ರ್' ಅಂದರೆ ಅಲ್ಸ್ಟರ್ ಅಂತ. ಅದರ ಸಮಸ್ಯೆ ಪರಿಹರಿಸಲಾಗಲಿಲ್ಲ ಅವನಿಗೆ —ಅವನ್ನ ಕಾಶ್ಮೀರದ ದ್ವಂದ್ವ ಬಿಡಿಸಲು ಕರೆಸೋದು ನಾಚಿಕೆಗೇಡಲ್ಲವೇ— ನೀತಿ ಹೇಳುಕ್ಕೆ ಆತನ್ನ ಕರೆಸಿದರೆ ಆತ........" ಎಂದ.

— ನಮ್ಮ ಹಿರಿಯರು ಬಲು ಪ್ರಚಂಡರು, ಅಂತಹ ಪಂಡಿತರಿಗೆ ನಾವೇನೇ ಪುತ್ರರು ಎನ್ನಿಸಿತು ನಮಗೆ.

* * *

"ಹೆಸರಿಟ್ಟರೆ ಹೀಗಿಡಬೇಕು ಪುಸ್ತಕಕ್ಕೆ. ಈ ಪಾನ ನಿರೋಧದ ಕಾಲದಲ್ಲಿ ಹೆಸರೇ ರುಚಿಯಾಗಿ ಮಾರಾಟ ಆಗಬಹುದು" ಅಂದ ಕೊರವ.

"ಅಂದರೆ ?" ಎಂದೆ.

"ಕುಡಿಯರ ಕೂಸು" ಅಂದ.



# ಸಿನಿಮೂವಾಲಿ ಮಲ್ಲಿ

“ ರತ್ನ ”

ಆಗಾಕಿಲ್ಲ ಮಲ್ಲೀ—ನನ್ ಕೈಲ್
ಆಗಾಕಿಲ್ಲ ಮಲ್ಲೀ—
ಯೆಂಡ್ರು ನಿನ್ನನಾ ಕಟಿಕೊಂಡು ನೀಸೋದು
ಆಗಾಕಿಲ್ಲ ಮಲ್ಲೀ || ಪ ||

ವಾರಕಿಂಗೆ ನಿಂಗ್ಐದು ಸಿನೇಮ
ಅಷ್ಟೂ ರಾತ್ರೆ ನಂಗೆ ತಂಗಳು ನೇಮ
ತಿಂದದ್ದೆಲ್ಲ ವೊಟ್ಟೆಬೂದಿಲಿ ವೋಮ
ವೊತ್ತತ್ತೈತೆ ಕಣ್ಣುತುಂಬುತ ತೇಮ || ೧ ||

ವೊಂಟೆ ಬಡಕನಾ ಸುಂಟರಗಾಳಿ
ಬದುಕು ರೂಡಿಯಿಲ್ಲ ನನಗಾ ಚಾಳಿ;
ವಾರಕ್ಕೈದು ಷೋ—ನಾನು ದಿವಾಳಿ!
ಎಲ್ಲಿ ಕಲಿತೆಯೋ ಇದ ನೀ ಮನಾಳಿ! || ೨ ||

ಚೆಡ್ಡಿ ನೋಡು ನಿನ್ನ ಚಿಕ್ಕ ಮಗಂದು!
ದೊಡ್ಡೋನದರಾಗೇನ್ ಕಡಿಮಿಲ್ಲ ಸಂದು!
ಮಗಳ ಲಂಗನಾರೆ ನೋಡಬಾರ್ದು ಬಂದು!
ಸಿನಿಮಾಗೆಲ್ಲಿ ನಾ ಸುರಿಯಲಿ ತಂದು! || ೩ ||

ಗಂಟೆ ಗಂಟೆ ಆ ಕ್ಯೂನಲಿ ಕಾದು
ಮುಕದ ಬಣ್ಣ ನೋಡು—ಅಪ್ಪಾ, ಸಾದು!
ಜೇಡನ ಬಲೆ ನೋಣ—ಸಿನಿಮಾ ಜಾದು—
ವೋಗಬೇಡ ಮಲ್ಲಿ ಆ ಹಾದಿ ಹಾದು! || ೪ ||

ದಾಸನಾಗಿ ನಾ ದರಿಸಿ ದವಾಲಿ
ನಿನ್ನ ಯಿಂದೆಮುಂದೆ—ಸಿನಿಮಾವಾಲೀ!
ಯಾವ ಗಳಿಗೆಲೋ ಕಟ್ಟಿದೆ ತಾಲಿ—
ನನ್ನ ಜೀವ, ಯೆಷ್ಟೋ, ನಿಂಗೇ ಹವಾಲಿ! || ೫ ||



# ನೀತಿಯ ಕತೆಗಳು
## ( ೧ )



(ಬಲಿತವರಿಗೆ)

---

ಒಂದೂರಿನಲ್ಲಿ ಒಂದು ಮನೆ ಇತ್ತಂತೆ. ಮನೇಲಿ ತಾಯಿ ಮಗ, ಮಗನ ಹೆಂಡತಿ, ಇಬ್ಬರು ಮಕ್ಕಳು ವಾಸವಾಗಿದ್ದರಂತೆ. ದೇಶಕ್ಕೆ ಸ್ವಾತಂತ್ರ್ಯ ಬಂದಾಗ ತಾಯಿಗೂ ಸ್ವಾತಂತ್ರ್ಯ ಬಂದಿತ್ತಂತೆ. ಗಂಡ ನ್ಯೂ ಮೋನಿಯಾ ಅಂತ ಹೆಸರಿದ್ದ ಹಳೇ ಖಾಯಿಲೆಗೆ ತುತ್ತಾದಾಗ.

ಅವತ್ತಿಂದ ಸೊಸೇನ ಹುರಿದು ಮುಕ್ಕುತ್ತಿದ್ದಳಂತೆ ನೋಡಿ—ಹೇಳು ಕ್ಕಾಗ!

ಒಂದು ದಿನ ರಾತ್ರಿ ಸೊಸೆ ಮಲಗಿದ್ದಾಳೆ. ಇನ್ನೂ ದೀಪಾನೂ ಆರಿಸಿಲ್ಲ. ಕಾಲು ಮೇಲೆ ಒಂದು ತಿಗಣೆ ಹತ್ತಿ ಕಚ್ಚಿ ರಕ್ತ ಹೀರುಕ್ಕೆ ಶುರು ಮಾಡ್ತಂತೆ.

ಸೊಸೇಗೆ ಅವತ್ತೆಲ್ಲಾ ಅತ್ತೆ ಹತ್ತಿರ ಜಗಳ. ಗಂಡನ ಮನಸ್ಸು ಒಲಿಸಿ ಕೊಳ್ಳಲು ಆಗುತ್ತಿಲ್ಲ. ಆ ಸ್ಥಿತೀಲಿ ಇದ್ದಾಗ ಈ ತಿಗಣೆ. ಎತ್ತಿದಳಂತೆ ಕೈಯನ್ನ ತಿಗಣೆ ಸಂಹಾರಕ್ಕೆ—ಅತ್ತೆ ಮೇಲಿನ ಕೋಪಾನ, ಗಂಡನ ಮೇಲಿನ ತಾಪಾನ ತೀರಿಸಿಕೊಳ್ಳುವುದಕ್ಕೆ.

ಆಗ ತಿಗಣೆ ಹೇಳ್ತಂತೆ, "ಅಮ್ಮಾ ನಾನೂ ಎರಡು ಜೀವಿ ಈಗ. ನನ್ನ ಕೊಂದರೆ ಎರಡು ಜೀವಾ ಕೊಂದಹಾಗೆ ಆಗುತ್ತೆ. ನಿನ್ನ ರಕ್ತ ಹೀರಿದ್ದು ತಪ್ಪು. ನೀನೂ ಎರಡು ಜೀವಿ. ಆದ ತಪ್ಪಿಗಾಗಿ ಕ್ಷಮೆ ಕೇಳುತ್ತೇನೆ. ದಯವಿಟ್ಟು ನನ್ನ ಪ್ರಾಣ ಉಳಿಸು. ನಿನಗೆ ತೊಂದರೆ ಕೊಡುಲ್ಲ. ಆದರೆ ನಿನಗೇನಾದರೂ ಸಹಾಯ ಬೇಕಾದರೆ ಮಾಡೇಮಾಡ್ತೇನೆ" ಎಂದು.

ಸೊಸೇಗೆ ನಗುಬಂತಂತೆ. ಅಲ್ಲಾ! ನನಗೆ ನೀನೇನು ಸಹಾಯಮಾಡ ಬಲ್ಲೆ! ಆದರೂ ಪರವಾಗಿಲ್ಲ. ನಿನ್ನ ಮುಂಬರುವ ಮಗುವಿಗಾಗಿ ನಿನ್ನ ಪ್ರಾಣ ಉಳಿಸುತ್ತೇನೆ ಅಂದು ಹೇಳಿ ಜೀವದಾನ ಮಾಡಿದಳಂತೆ.

ತಿಗಣೆ ಕೇಳ್ತಂತೆ "ನಿನಗೇನು ಕಷ್ಟ! ಅದನ್ನು ಆದರೆ ಪರಿಹಾರ ಮಾಡ್ತೇನೆ" ಅಂತ.

ಸೊಸೆ ಅಂದಳಂತೆ "ನಮ್ಮತ್ತೆ ಕಾಟ ತಪ್ಪಿದರೆ ನಿನ್ನ ಕಾಟನಾದರೂ ತಡೆದುಕೊಳ್ಳುತ್ತೇನೆ" ಅಂತ.

ತಿಗಣೆ ಆಗಲಿ ನೋಡೋಣ ಅಂತ ಹೇಳಿ, ತಿಗಣೆ ರಾಜ್ಯಕ್ಕೆ ಹೋಗಿ ತುತೂರಿ ಊದಿತಂತೆ ತಿಗಣೆ ಸಿಪಾಯಿಗಳೆಲ್ಲವೂ ಸಿದ್ಧವಾದಾಗ ಅತ್ತೆ ಹಾಸಿಗೆಗೆ ಮುತ್ತಿಗೆ ಹಾಕಿದವಂತೆ. ಮೂರು ರಾತ್ರಿ ಈ ಧಾಳಿ ನೋಡಿ. ಅತ್ತೆ ಮಗನಿಗೆ ಹೇಳಿದಳಂತೆ, "ಮಗೂ ಈ ಮನೇಲಿರುಕ್ಕೆ ಸಾಧ್ಯವಿಲ್ಲ. ನಾನು ದೊಡ್ಡ ಮಗನ ಮನೇಗೆ ಚಿಕ್ಕಮಗಳೂರಿಗೆ ಹೋಗುತ್ತೇನೆ. ಮೂರು ತಿಂಗಳು" ಅಂತ ಹಾಗೇ ಆಗಲಿ ಅಂದನಂತೆ ಮಗ. ಹಾಗೇ ಮಾಡಿದಳಂತೆ ಅತ್ತೆ.

* * *

ಬೆಳದಿಂಗಳು ಕಿಟಕೀಲಿ ಹಾಸಿಗೆ ಮೇಲೆ ಬಿದ್ದಿತ್ತಂತೆ. ಒಂದು ತಿಗಣೆ ಮಗನ ತೋಳನ್ನ ಹತ್ತಿತ್ತಂತೆ. ಅದರ ಸಂಹಾರಕ್ಕೆ ಅಂತ ಕೈ ಎತ್ತಿದನಂತೆ ಮಗ. ಆಗ ಸೊಸೆ ಅವನ ಕೈಹಿಡಿದು ನಿಲ್ಲಿಸಿ ಕತೆಯೆಲ್ಲಾ ಹೇಳಿದಳಂತೆ.

ಈಗ ಮಗ ಸೊಸೆ ಮಕ್ಕಳು ತಿಗಣೆ ಎಲ್ಲಾ ಸುಖವಾಗಿದ್ದಾರಂತೆ.

**ನೀತಿ :**— ಯಾವ ಬೇನೆಯಿಂದ ಇನ್ನು ಯಾವ ದೊಡ್ಡರೋಗಕ್ಕೆ ಮದ್ದಿದೆಯೋ ದೇವರೇ ಬಲ್ಲ !

—ಶಿವು.

---

ಹೆತ್ತವರಿಗೆ ಹೆಗ್ಗಣ ಮುದ್ದಿರಬಹುದು.
ಆದರೆ ಬಿತ್ತವರಿಗೆ ?

* * *

ಹೆಸರು ನೋಡಿದರೆ "ತಿಲೋತ್ತಮ"
ಹತ್ತಿರ ಹೋದರೆ—ತಿಲವೇ ಉತ್ತಮ.

* * *

ಕೋಡಂಗಿ ಹುಣ್ಣಿಗೆ ಐಯೋಡೀನ್ ಬೇಕೆ ?

* * *

ಮೀನಿಗೆ ಈಜು ಹೇಳಿಕೊಟ್ಟರೂ ಹೇಳಿಕೊಡಬಹುದು.
ಆದರೆ.... ಮೀನಾಕ್ಷೀಗೆ ಮೋಜು ಕಲಿಸಬೇಕೇ ?

* * *



# ನವ್ಯ ಕವಿತೆ



---

ಇಲ್ಲ, ಈ ತಲೆಯಲಿ ಇಲ್ಲ
ಏನೇನೂ ಇಲ್ಲ
ಬರಿ ಶೂನ್ಯವೆ ಎಲ್ಲ

ಹೊರಗಡೆ ಗಾಳಿಯೊ ಭೋರಾಡುತ್ತಿದೆ
ಕಿಟಕಿಯ ಕದಗಳು ತೂಗಾಡುತ್ತಿವೆ
ಟೇಬಲ್ಲಿನ ಮೇಲಿರುವೀ ಕಾಗದವೂ
ಸುಮ್ಮನೆ ಇರಲಾರದೆ ಹಾರಾಡುತ್ತಿದೆ
ಆದರೆ ಈ ತಲೆಯಲಿ ಇಲ್ಲ
ಏನೇನೂ ಇಲ್ಲ
ಬರಿ ಶೂನ್ಯವೆ ಎಲ್ಲ.

* * *

ಆಕಾಶದಳೊಂದರಡಿವೆ ಮೋಡಗಳು.
ತೇಲುವ ಸೋಮಾರಿಯು ಕೂಸುಗಳು:
ಭಾವಣಿಯಿಂದ್ಯೈತಂದಿಹ ಬಿಸಿಲಿನ ಕೋಲಿನಲಿ
ಹಾರಾಡಿವೆ ಲಕ್ಷಾಂತರ ಧೂಳುಗಳು
ಆದರೆ ಈ ತಲೆಯಲಿ ಇಲ್ಲ
ಏನೇನೂ ಇಲ್ಲ
ಬರಿ ಶೂನ್ಯ ಎಲ್ಲ.

* * *

ಏಕಿರಬೇಕೀ ವಿಶ್ವದಲೇನಾದರು
ಏಕಿರಬೇಕು?
ಮತ್ತೇಕಿರಬೇಕು?
ಏನೇನೂ ಇರದಿದ್ದರೆ ಆ ಸೊಗಸೇ ಸೊಗಸು
ಏನೇನೋ ಇರುವುದರಿಂದಲೆ ಈ ಹೊಲಸು

ಕೈಯ್ಯಲಿ ಪೆನ್ನಿದೆ ಕಾಗದವಿದೆ
ಅದಕೀ ಕವಿತೆಯ ಕೊರೆಯುವ ಮನಸು.
ಅದರಿಂದಲೆ ಏನೂ ಇರದಿದ್ದರೆ ಒಳಿತು
ಬಲು ಒಳಿತು.

ಏನೂ ಇರದಿದ್ದರೆ ವಿಶ್ವಕೆ ಶಾಂತಿ.
ಏನೂ ಇರದಿದ್ದರೆ ಮನಸಿಗೆ ಶಾಂತಿ.

—ಜಿ. ಎಸ್. ಶಿವರುದ್ರಪ್ಪ.

---




ಪತ್ರಿಕೆ ಬೆಲೆ ಎಷ್ಟು ಹೆಚ್ಚಾಗಿದೆ ಅಂತಮಾತ್ರ ನಾನು ಪತ್ರಿಕೆ ಓದಿ ಕೊಟ್ಟು ಬಿಡ್ತೀನಿ–
ಒಂದು ನಿಮಿಷ ಕೊಡಿ ಇಲ್ಲಿ!

ಆಗ .......

## ಮನಸ್ಸಿಗೆ ಶಾಂತಿ ಪಡೆಯಲು





## ಕೃಷ್ಣಾಂಜಿನ ಸಹಕಾರಿ

ಈಗ

## ಮನಸ್ಸಿಗೆ ಶಾಂತಿ ಸುಖ ಬೇಕಾದರೆ




## ಶ್ರೀ ಕೃಷ್ಣಾ ಸ್ಪಿನ್ನಿಂಗ್ ಮತ್ತು ವೀವಿಂಗ್ ಮಿಲ್ಸ್ ಅವರ ಬಟ್ಟೆಗಳು ಸಹಕಾರಿ.

*Inserted by:* YADALAM SUBBIAH SETTY & SONS,
Managing Agents.

K.A.S.

# ಕವಿರಾಯ ಸಾಂಬಶಿವ

"ಅಯ್ಯೋ" ಎಂದೆನ್ನದೆ ವಿಧಿಯಿಲ್ಲ. ಕೆದರಿದ ಪೊದರು ಕ್ರಾಪು. ಮಾಸಿದ ದೊಗಲೆ ಷರಾಯಿ. ಹಿಂದೊಮ್ಮೆ ಬೆಳ್ಳಗಿದ್ದ ಬಿಳೀ ಷರಟು—ಎಡಗೈಯಲ್ಲಿ ಚಿಕ್ಕ ಹಾಸಿಗೆ, ಬಲಗೈಯಲ್ಲಿ ಒಂದು ಹಳೇ ಟ್ರಂಕು. ಬಾಯಿ ಬಾಯಿ ಬಿಡುತ್ತಾ—ಒಣಗಿದ ಗಂಟಲು ಒದ್ದೆ ಮಾಡಲೋ ಎಂಬಂತೆ ಬಾರಿಬಾರಿಗೂ ಎಂಜಲು ಗುಟಕರಿಸುತ್ತಿದ್ದ. ಏನು ಮಾತು ಹೊರಟೀತೋ ಎಂದು ಕಾದು ಕುಳಿತಂತೆ ಬಾಯಿವರೆಗೂ ಬಾಗಿದ ಗಿಣಿ ಮೂಗು. ಏನು ಮಾತಾಡಿದರೂ ಆ ಮೂಗಿನ ತುದಿ ತಲೆ ಹಾಕುತ್ತಿತ್ತು. ಹುದುಗಿದ ಕಣ್ಣು, ಪೊಚ್ಚು ಬಿದ್ದ ಗಲ್ಲ ಏರಿದ ಹುಬ್ಬು, ಕೆಳತುಟಿ ಕಚ್ಚಿ ಆಳವಾಗಿ ಆಕರ್ಷಿಸುವಂತೆ ನೋಡಿದ ಮನೆ ಮುಂದೆ ನಿಂತ ಸಾಂಬಶಿವ. "ಬಾ" ಎನ್ನದೆ ಮತ್ತೇನು ಮಾಡಲಿ?

ಪಾಪ ಸಾಂಬಶಿವ ಕವಿ. ಬರೆಯುವ ರೋಗ ಎಂದು ಅವನೇ ಹೇಳಿದ್ದ. ಇವನ ಈ ಕಾರ್ಪಣ್ಯದ ಕರುಣಾಜನಕ ಪರಿಸ್ಥಿತಿ ಕಂಡು ಪ್ರತಿ ಕನ್ನಡಿಗನೂ ಮರುಗಲೇ ಬೇಕು. "ಬೇಡ ಮಗು ಈ ಬರೆಯುವ ಹವ್ಯಾಸ—ಹೊಟ್ಟೆ ತುಂಬೋ ಮಾರ್ಗವಲ್ಲ ಅದು—ಆದೇ ಪೇಪರಿಗೆ ಬರೆಯೋದು ಬಿಟ್ಟು, ಪೇಪರು ವ್ಯಾಪಾರ ಮಾಡು ಎರಡು ಹೊತ್ತು ಪಿಂಡ ಸಿಕ್ಕೀತು ..." ಎಂದು ಸಾರಿ ಸಾರಿ ಹೇಳಿದ್ದೆ ಸಾಂಬಶಿವನಿಗೆ—ಅವ ಕೇಳಬೇಕಲ್ಲ. ನಾಯಿಬಾಲದ ಸಮಾಚಾರ—ಮತ್ತೆ ಲೇಖನಿ ಬಿಳಿ ಕಾಗದ ಹಿಡಿದು ಕುಂತನೇ? ಇವನ ಚರ್ಯೆ, ಇವನ ಹಠ ಕಂಡು ಕಾಣದವರು ಈ ಪಾಪಿಯ ಪಾಡು ನೋಡಿ, ಇದೊಂದು ಕಾಸಿಲ್ಲದ ಕಮ್ಯೂನಿಸ್ಟು ಎಂದಂದದ್ದುಂಟು. ಹಿಂದೊಮ್ಮೆ ಹೈದರಾಬಾದಿನಿಂದ ಬೆನ್ನು ಬಿದ್ದ ಪೋಲೀಸರು—ಇವನನ್ನು ಯಶವಂತಪುರದ ತನಕ ರೈಲಲ್ಲೇ ಬೆನ್ನಟ್ಟಿ ಬಂದಿದ್ದರು. "ಅಲ್ಲಪ್ಪಾ, ನಾನು ಕುಡುಗೋಲು ಕಂಡರಿಯೆ—ಸುತ್ತಿಗೆಯ ಎತ್ತಲಾರದ ನರ—" ಎಂದು ಹೇಳಬಾರದೆ ಈ ಶುದ್ಧ ಶುಂಠಿ ಸಾಂಬಶಿವ.

ರೈಲಲ್ಲಿ ಉದ್ದಕ್ಕೂ "ಅನ್ನ ಅನ್ನ ಇನ್ನಿಲ್ಲದ ಪರಮಾನ್ನ" ಎಂಬ ಪದ್ಯ ಬರಿತಾ ಕೂತಿದ್ದ. ನಿಜಕ್ಕೂ ಅವರ ಪರಿತಾಪ ಪಡುತ್ತಿದ್ದುದು ಅವನಿಗೇ

ಬೇಕಾಗಿದ್ದ ಹಿಡಿ ಅನ್ನ ಕ್ಕಾಗಿ. ಆ ಪೋಲೀಸರು ಈ ಪೋಲೀಸರಿಗೆ ಹೇಳಿ ಅವರ ಆತಿಥ್ಯದಲ್ಲೇ ಆ ರಾತ್ರಿ ಕಳೆಯಬೇಕಾಯ್ತು ಸಾಂಬಶಿವ. ಕಡೆಗೆ ಇವನ ಬಳಿಯ ಸಾಹಿತ್ಯ ರಾಶಿಯನ್ನು ಓದಿದ ಸಬ್ ಇನ್ಸ್ಪೆಕ್ಟರು "ಪಾಪ ಪೇಪರಿನವ" ಎಂದು ಬಿಡಿಸಿದ್ದರು. ಆಗೊಮ್ಮೆ ಹೀಗೊಮ್ಮೆ ಹೀಗೆ ಬೇವರ್ಸಿಯಂತೆ ನಮ್ಮ ಮನೆ ಮುಂದು ಅವ ಬರುವುದುಂಟು. ಈಗೂ ಹಾಗೇ ಬಂದಿದ್ದಾನೆಂದು "ಬಾ ಸಾಂಬೂ" ಎಂದು ಕರೆದು ಕೂಡಿಸಿದೆ. ತಾನು ಕವಿ ತನ್ನ ಸೇವೆ ಎಲ್ಲರೂ ಮಾಡಬೇಕೆಂದರೆ ಹೇಗೆ? ನನ್ನಾಕೆ ದಿನ ತುಂಬಿ ತವರು ಸೇರಿದ್ದ ದಿನಗಳವು ಆಗಲೇ ಸಾಂಬು "ಭವತಿ" ಎಂಬ ಮುಖದ ಕಳೆ ಹಾಕಿ ಬಂದಿದ್ದು. ನಾನು ಬಾ ಎಂದದ್ದು. ಪಾಪ ನಿಜ ಅವ ಕವಿ—ಆದರೆ ನಾನು ಮಕ್ಕಳೊಂದಿಗ ನೆಂಬುದು ಸುಳ್ಳೆ? ಹೋಗಲಿ ಹೆಂಡಿರು ಬರುವವರೆಗೆ ಇರಲೆಂದು ಮುಂದಿನ ರೂಮು ಬಿಟ್ಟುಕೊಟ್ಟೆ. ಎಲ್ಲೋ ಊಟವೆಂದು ಹೇಳಿದ್ದ. ನಿಜಕ್ಕೂ ಸೆಟ್ಟಿ ಸತ್ತಮೇಲೆ ಬಂಡವಾಳ ಗೊತ್ತಾದರೆ ಕವಿ ಜೊತೆಗೆ ಇದ್ದಮೇಲೆ ಅವನ ಭಂಡಾರ ಗೊತ್ತಾಗಬೇಕು. ಅಂತೆ ಸಾಂಬಶಿವನ ಸೋಗು ನನಗೆ ಗೊತ್ತಾಯಿತು. ತಾನು ಕವಿ ಎಂಬ ಅಹಂಕಾರ ಈ ಪಾಪಿಗೆ. ಅವ ಬರೆದ ಒಂದು ಪದ್ಯವೂ ಮುದ್ರಾರಾಕ್ಷಸನ ಪಾಲಾಗಲಿಲ್ಲ. ಆದರೂ ಇಡೀ ಜನಾಂಗವೇ ತನಗೆ ಶಿಶ್ರೂಷೆ ಮಾಡುವುದು ಅದರ ಕರ್ತವ್ಯವೆಂಬ ಅಭಿಪ್ರಾಯ ಅವನದು.

ಮೊದಲ ದಿನ ಬಂದ—ನಾನು ಬಟ್ಟೆ ಒಗೆಯುತ್ತಿದ್ದೆ—ಟವಲೊಂದು ನಡುವಿಗೆ ಸುತ್ತಿಕೊಂಡು (ಅದೂ ನನ್ನದು) ಷರಾಯಿ ಷರಟು ಬಿಚ್ಚಿ ನನ್ನ ಬಟ್ಟೆ ಜೊತೆಗೆ ಹಾಕಿ ನಡೀತಿದ್ದ. ಹೋದವನು ನನಗಾಗಿ ನಾನು ಮಾಡಿದ ಕಾಫಿ ಬಸಿದು ಹಾಯಾಗಿ ಮಂಚದ ಮೇಲೆ ಉರುಳಿದ್ದ. ಬರಿದಾದ ಕಾಫಿ ಕೆಟಲು ಕಂಡು ಕೆಂಡವಾಗಿ ನಾನು ರೂಮು ಸೇರಿದಾಗ ಹಲ್ಲಿ ಬರೆದ ಕವಿತೆ ಯೊಂದರ ಅರ್ಥಮಾಡಿ ಹೇಳಲು ಬಂದ ನಾನು ಪೆಚ್ಚಾಗಿ ಹೋಟಲಿಗಾದರೂ ಹೋಗಿ ಕಾಫಿ ಬಸಿಯುವ ಎಂದಾಗ—"ಬಂದೆ" ಎಂದು ಸರಸರನೆ ಪಂಚೆ ಉಟ್ಟು ಬನೀನು ಏರಿಸಿ ನನ್ನ ಜೊತೆಗೇ ಬಿದ್ದು, ಕಾಫಿ ಜೊತೆಗೆ ದೋಸೆಯನ್ನೂ ಬೇಡುವ. ಮೇಲಾಗಿ ಅವ ಉಟ್ಟು ಬಂದುದು ನನ್ನ ಪಂಚೆ ನನ್ನ ಷರಟು ಎಂದು ತಿಳಿದಾಗ ಹಲ್ಲು ಕಡೆದೆ. ಅವ "ಕುಮಾರವ್ಯಾಸ"ನನ್ನು ಉದಹರಿಸ ತೊಡಗಿದ್ದ. ನಾನೇನು ಮಾಡಲಿ?

ಅವನದೇನು ಮುಲಾಜು! ಅವ ಕವಿಯಾದರೆ ನನ್ನೇಕೆ ಸತಾಯಿಸಬೇಕು? ಹೊಟ್ಟೆಗಿಲ್ಲದಿದ್ದರೂ ಅವನಿಗೆ ಸಿಟ್ಟು ಬಹಳ. ನನಗೆ ಅವನ ಹತ್ತರಷ್ಟು ಕೋಪ. ಸೊಗಸಾಗಿ ನೀರುಳ್ಳಿ ಆಲೂಗಡ್ಡೆ ಹೆಚ್ಚಿ ಮಸಾಲೆ ಅರೆದು ಹುಳಿಮಾಡಿಕೊಂಡಿದ್ದೆ. ಮೊದಲವಾರದ ರೇಷನ್ ಸಣ್ಣಕ್ಕಿಯೇ ಸಿಕ್ಕಿತ್ತು. ಮಾವಿನಕಾಯಿ ಉಪ್ಪಿನ

ಕಾಯಿ ನನ್ನ ಹೆಂಡತಿ ತವರೂರಿಂದ ಇಲ್ಲಿಗೆ ಬಂದವರ ಜೊತೆಗೆ ಒಂದು ಜಾಡಿ ಕಳಿಸಿದ್ದಳು. ಅರಪಾವು ಹಾಲು ಹೆಚ್ಚು ಕೊಂಡು ಹೆಪ್ಪುಹಾಕಿದ್ದೆ. ಇನ್ನೇನು ಕುಡಿ ಬಾಳೆಯೆಲೆ ಹಾಸಿ ಮಿಳ್ಳೆ ತುಪ್ಪ ಹಾಕಿಕೊಂಡು ಅನ್ನ ಬಡಿಸಿಕೊಂಡು ಹುಳಿ ಪಾತ್ರೆಗೆ ಕೈಹಾಕಿದ್ದೆ—ಪಾಪಿ ಹ್ಯಾಪು ಮೋರೆ ಹಾಕಿಯೇ ಬಂದ. ಬಂದವನು "ಹಸಿದು ಬಂದವರಿಂಗೆ ಅಶನವೀಯಲು ಬೇಕು" ಎಂಬ ಪದ್ಯದ ಅರ್ಥ ಬಿಡಿಸಿ ಹೇಳಲು ತೊಡಗಿದ. ಇನ್ನು ಆ ನನ್ನ ಪರಮಾಯಿಷಿ ಹುಳಿ ಅನ್ನ ಗಂಟಲಲ್ಲಿ ಹೇಗೆ ಇಳಿದೀತು? "ಕೂಡು" ಎಂದೆನ್ನದೆ ಇನ್ನೇನು ಮಾಡಲಿ? ನನಗೆ ಸಿಕ್ಕಿದ್ದು ತಳದ ಅನ್ನ, ಹೋಳಿಲ್ಲದ ಹುಳಿ, ನೀರುಮಜ್ಜಿಗೆ ಹೇಗಿದೆ ಕವಿ ಸಹವಾಸ!

"ನೀ ಬರೆದ ಕವಿತೆಯ ಕಂತೆ ಕೊಡು ಸಾಂಬಶಿವ!" ಎಂದು ಕೇಳಿದಾಗ ನಿಜಕ್ಕೂ ಅವ ಕಕ್ಕಬಿಕ್ಕಿಯಾದ.

"ಕವಿರಾಯ ಓದು ನಿನ್ನ ಕವಿತೆ ಕೇಳಿ ಹೊಟ್ಟೆ ಮೇಲೆ ಒದ್ದೆ ಬಟ್ಟೆ ಹಾಕಿಕೊಳ್ಳುವ" ಎಂದು ಬೇಡಿದಾಗ ಸಾಂಬಶಿವ ಬಿಕ್ಕಿಬಿಕ್ಕಿ-ಅಳುವವನಂತೆ ಮುಖ ಮಾಡಿದ. "ಯಾಕೆ—ಏನು ವಿಷಯ" ಎಂದು ವಿನಯದಿಂದ ಕೇಳಿದಾಗ ತಾರಮ್ಮಯ್ಯ ಆಡಿದ." ಯಾವುದಕ್ಕಾಗಿ ಇಡೀ ಜೀವಮಾನ ಮೀಸಲಾಗಿಟ್ಟಿದ್ದಿಯೋ ಆ ಕಾವ್ಯಸುಧೆಯ ರುಚಿ ನೋಡುವ ತಾ ನಿನ್ನ ಕಡತದ ಕಂತೆ" ಎಂದಾಗ ಅವ ತಲೆ ತಗ್ಗಿಸಿದ. ಅವನ ಬಾಗಿದ ಮೂಗಿನ ತುದಿಗೆ ಕಣ್ಣಿಂದ ಹರಿದ ನೀರು ಹನಿ ಬಂದು ಆಶ್ರಯ ಪಡೆಯಿತು. "ಹೂಂ ಹೇಳು" ಎಂದು ಒತ್ತಾಯ ಮಾಡಿದೆ. ಅವ ಗದ್ಗಸ್ವರದಿಂದ "ಏನು ಹೇಳಲಿ—ಎಲ್ಲಿ ಹೇಳಲಿ" ಎಂದ.

"ಅರೆ! ನಿನ್ನ ಕವಿತೆ ಓದಯ್ಯ .."

"ಅದೊಂದು ಪ್ರತಿಜ್ಞೆ...."

"ಏನು ?...."

"ಪದ್ಯ ಓದೋದು....ನಿಜ ನಾನು ಕವಿ.. ಆದರೆ ನಾನೇ ನನ್ನ ಸವಾಲು ತೀರುವ ತನಕ ಪದ್ಯ ಬರೆಯುವುದಿಲ್ಲವೆಂದು ಪ್ರತಿಜ್ಞೆ ಮಾಡಿದ್ದೇನೆ ..."

"ಏನು ಪ್ರತಿಜ್ಞೆ ಅದು....ಏನು ಸವಾಲು ಯಾರು ಹಾಕಿದ್ದು...."

"ನಾನು ಈ ಸಮಾಜಕ್ಕೆ ಈ ಕೂಸನ್ನು ಈ ಕವಿಯನ್ನು ಸಾಕಬೇಕಾದದ್ದು ನೀವು ತಾನೆ! ನಾವು ಪದ್ಯ ಬರೆಯುವವರು—ನೀವು ಓದುವವರು—ನಮ್ಮಿಂದಲೆ

ನಿಮ್ಮ ಜೀವನ ವನಸುಮದಂತೆ ವಿಕಸಿಸುವುದು. ನಾವು ಕಾನನದ ಮಲ್ಲಿಗೆಯಂತೆ ಅರಳಬೇಕಾದರೆ—ಬೇಲೂರ ಬಾಲಕಿಯರಂತೆ ಬಳುಕಬೇಕಾದರೆ—ಕುಮಾರವ್ಯಾಸನು ಹಾಡಬೇಕಾದರೆ— ತಂಗಿ ತುಂಬಿ ಬಂದಿತ್ತಾ—ಎಂದೆನ್ನಬೇಕಾದರೆ—ಅದನ್ನ ಓದಿ ನೀವು. ತಿಕಿ ತಿಕಿ ಧಿಮಿ ಧಿಮಿ ಹಾಂಗೊಮ್ಮೆ ಹೀಂಗೊಮ್ಮೆ ಕುಣಿಬೇಕಾದರೆ—ನಾವು ಪದ್ಯ ಬರೆಯಬೇಕು. ಬರೆಯಲು ಶಕ್ತಿಬೇಕು. ಶಕ್ತಿಗೆ ಭುಕ್ತಿತಾನೆ ಮಾರ್ಗ! ಆ ಭುಕ್ತಿ ಬರೀ ಪದ್ಯ ಬರೆದರೆ ಯಾರು ಕೊಡುತ್ತಾರೆ?....ನೀವು ಓದುವವರು ಕೊಡಬೇಕೊ ಬೇಡವೋ ಹೂಂ—ಅನ್ನು...." ಎಂದ.

"ಹೂಂ...." ಎಂದೆ.

"ಮೊನ್ನೆ ನೀನು ಬಿಸಿಬೇಳೆ ಮಾಡಿದಾಗ ನನಗೆ ಬಡಿಸೋ ಇಷ್ಟವಿತ್ತೆ? ಅರ್ಧ ಘಂಟೆ ಹಸಿದು ಬಂದವರಿಂಗೆ—ಉಪದೇಶ ಮಾಡಬೇಕಾಯ್ತು .. ಅದಕ್ಕೆ ಓದೋವನು ಹಾಕದಿದ್ದರೆ ನಾನ್ಯಾಕೆ ಬರೆಯಲಿ?—ಬೇಕಾದರೆ ಅನ್ನ ಹಾಕಿ ಬರಿಸಿಕೊ" ಎಂದು ನನ್ನ ಮೇಲೇ ಸವಾಲು ಹಾಕಿದ. ಅವ ರೇಗಿದ್ದ ನಿಜ. ನಾನೂ ರೇಗಿ—"ಬರೀ ಪದ್ಯ ಬರೆದರೆ ಸಾಲದು ಭುಕ್ತಿಮಾರ್ಗ ನೀನೇ ಹುಡುಕ್ಕೊಬೇಕು; ಕವಿ ಆದಾಕ್ಷಣ ಕರೆದು ಕದನ್ನ ಹಾಕೊಕಾಗುತ್ಯೆ, ನಿನಗೆ ಕವಿ ಆಗೂಂದೊನ್ಯಾರು" ಎಂದು ಮಾತು ಉಚಾಯಿಸಿದೆ. "ಮಂದಮತಿ ನಿಂದಿಸಲು ಮನಕದ ತಂದುಕೊಳ್ಳದ ನರನು ಜಾಣನು" ಎನ್ನುವ ಕವಿತೆಯ ಅರ್ಥಬಿಡಿಸಿ ಹೇಳಿ ನಾನು ಬೈದದ್ದು ತಪ್ಪು ಎಂದು ಸಾಧಿಸಿದ. ನನಗೆ ಮತ್ತೂ ರೇಗಿತು. ಮೂತಿ ಮೂತಿ ತಿವಿಯಲು ಹವಣಿಸಿ, ಹೊಲಸು ಇಜಾರ ಕೆದರಿದ ಕ್ರಾಪು ಮಾಡಿಕೊಂಡು ಸೋಮಾರಿ ಹಾಗೆ ತಿರುಗಿದರೆ ಆಯಿತೇನೋ ಕಮಂಗಿ ....ಭುಕ್ತಿಗೆ ಮಾರ್ಗ ಹುಡುಕೋದುಬಿಟ್ಟು ಪದ್ಯ ಪದ್ಯಾಂತ ಪರದಾಡ್ತಿಯಲ್ಲೊ ಪಾಪಿ—ಬಟ್ಟೆ ಒಕ್ಕೊಳ್ಳೊಳೇನು ರೋಗ ನಿನಗೆ?....ಇದು ಕೇವಲ ಅಪ್ಪಟ ಸೋಮಾರಿ ತನವೇ ಹೊರತು ಮತ್ತೇನೂ ಅಲ್ಲ—ಬಾ ನಮ್ಮ ಫ್ಯಾಕ್ಟರಿಗೆ ಸೇರು ಮೈಮುರಿದು ಕೆಲಸಮಾಡು, ಹೊಟ್ಟೆ ತುಂಬ ಹಿಟ್ಟು ಸಂಪಾದಿಸು, ಜುಟ್ಟಿಗೆ ಮಲ್ಲಿಗೆ ಮುಡಿ—ಪದ್ಯಾನೂ ಬರಿ ಪುರುಸೊತ್ತಾದಾಗ, ಅದಕ್ಕಾಗೇ ಸಾಯಬೇಡ ....ತಿಳೀತೇನೋ ..."

"ಆಯಿತೋ ನಿನ್ನ ಭಾಷಣ . ಇನ್ನು ನನ್ನ ಪುರಾಣ ಪರಾಂಬರಿಸು.... ಜಗತ್ತು ಬದಲಾಯಿಸ್ತಾ ಇದೆ—ಕಾಸಿಲ್ಲದವ ಕಮ್ಯೂನಿಸ್ಟು—ಕೆಲಸವಿಲ್ಲದವ ಕವಿ ಎಂದೆನ್ನುತ್ತಾರೆ. ಕೆಲವರು ಅದು ತಪ್ಪು ಕೂಳಿಲ್ಲದವ ಕವಿ—ವ್ಯಾಪಾರವಿಲ್ಲದವ ವೇದಾಂತಿ—ಮಾನವೇ ಇಲ್ಲದವ ಮಂತ್ರಿ ಹೀಗೆ ಸೂಕ್ತಗಳು ಕಾಲಕ್ಕನುಸಾರವಾಗಿ ಸೂತ್ರಗಳು ಬದಲಾಯಿಸ್ತಾಯಿವೆ ಕಂಡೆಯಾ—ನಮ್ಮ ಸರ್ಕಾರ

ಬರೋಕೆ ಮುಂಚೆ ಜೈ ಜೈ ಅಂದಿದ್ದೆ ಹಾಗೂ ಅಂದಿನ ಸರ್ಕಾರ ಸೆರೆಮನೆ ಗೆಳೆಯಿತು. ಇಂದಿನ ಸರ್ಕಾರ ಬಂತು—ನನ್ನ ಪದ್ಯ ಓದಿತು—ಕಾಸಿಲ್ಲದ ನನ್ನ ಕಮ್ಯೂನಿಸ್ಟನೆಂದೇ ಜೈಲು ಕಾಣಿಸಿತು. ಇಲ್ಲಪ್ಪಾ ಪದ್ಯ ಬರೆಯೋ ಪಾಪರ್ ನಾನು ಎಂದರೂ ಕೇಳರು. ಹೀಗಿರುವಾಗ ನಾನೇನು ಕೆಲಸಮಾಡಲಿ? ಎಲ್ಲಿ ಹೋಗಲಿ?....ಅದಕ್ಕೆ ಸಮಾಜಕ್ಕೆ ಸವಾಲು ಹಾಕಿ ನಿನ್ನ ಮನೆ ಕವಳಕ್ಕೆ ಎಲೆ ಹಾಕಿಕೊಂಡು ಕೂತೆ—ನೀನು ಬೈದು ಕಳಿಸಿದರೆ "ಅಯ್ಯೋ ಪಾಪ" ಎಂದೆನ್ನುವ ಇನ್ನೂ ನೂರು ಮಂದಿ ನನಗಾಗಿ ಅನ್ನ ಹಾಕಬಲ್ಲರು ಕಂಡೆಯಾ, ಆ ಮರುಕ ಹುಟ್ಟಿಸಲೇ ಈ ಕೆದರಿದ ಕ್ರಾಪು ಹ್ಯಾಪು ಮೋರೆ—ತಿಳೀತೇನಯ್ಯಾ...." ಎಂದು ಹೆಪ್ಪುಹಾಕಿದ ಮೊಸರು ಪಾತ್ರೆ ಕಡೆ ನೋಡಿ, ಹೊಟ್ಟೆ ಹೊಟ್ಟೆ ಕಿವಿಚಿಕೊಂಡು ಹೊರಳಾಡಿದ ಆ ಪಾಪಿ.

ಇನ್ನೇನು ಮಾಡಲಿ! ನನ್ನ ಕರ್ಮ ಹಿಂದೊಮ್ಮೆ ನಿನ್ನ ಋಣ ತಿಂದಿರ ಬೇಕು; ಇಂದು ತೀರಿಸುತ್ತಿದ್ದೇನೆಂದುಕೊಂಡು ಅವನಿಗೆ ಆಶ್ರಯ ಕೊಟ್ಟಿದ್ದೇನೆ. ಇನ್ನೇನು ಮೂರೇ ತಿಂಗಳು. ನನ್ನ ಮನೆಯಾಕೆ ಬಂದ ಮೇಲೆ ಇವನನ್ನು ರೂಮು ಬಿಟ್ಟು ಅಟ್ಟಲೇಬೇಕಷ್ಟೆ?

ಹಾಯಾಗಿ—ಸೋಮಾರಿ ಸಾಂಬಶಿವ ಕವಳ ಕತ್ತರಿಸುತ್ತಿದ್ದಾನೆ. ಹೋಗಲಿ ಪದ್ಯಾನಾರೂ ಬರಿತಾನೇ ಅದೂ ಇಲ್ಲ. ಬರೀ ಸೋಗಿನ ಸಾಂಬ ಶಿವ. ಋಣ ತೀರುವವರೆಗೆ ನಾನೂ ಅವನನ್ನು ಸಾಕಲೇ ಬೇಕಾಗಿದೆ.

—ದಾಶರಥಿ ದೀಕ್ಷಿತ್.




ತಾಯಿ :—ನರ್ಸಿಗೆ—ಏನಮ್ಮಾ! ಡಾಕ್ಟರಿಗೆ ಮಕ್ಕಳಿಲ್ವೇ!
ಇಷ್ಟು ಆಡಿಸ್ತಾರೆ ಈ ಮಗೂನ.



# ಚಿಕ್ಕಪೇಟೆ



---

ಚಿಕ್ಕಪೇಟೆ ಚೌಕದಲ್ಲಿ ನಿಂತು ನಾನು ನೋಡುತ್ತಿದ್ದೆ
ಅತ್ತ ಇತ್ತ ಸುತ್ತಿ ಸರಿದು ಹೋದ ಮುಖಗಳ!

* * *

ಎಂಥ ಮುಖ, ಎಷ್ಟು ಮುಖ, ಕಷ್ಟ ಹೊತ್ತ ನಷ್ಟ ಮುಖ,
ಪಂಥತೊಟ್ಟು ನೋವ ನುಂಗಿ ನಲಿವು ಕಲಿತ ಧೀರ ಮುಖ!
ಭಯದ ನಗೆಯ ನಯದ ಸೊಗದ ಬಗೆಬಗೆಯ ಮುಖಗಳು!
ಯೋಗ ಭೋಗ ರಾಗ ತುಂಬಿ ರೋಗ ಕಳಿದ ಮುಖಗಳು!
ಬೇಟೆಯಿಂದ 'ಬಾಡಿ' ಬಳಲಿ ಬೇಟದಿಂದ 'ಬಾಡಿ' ತೊಳಲಿ
ಕ್ರೌರ್ಯ ಕೊರೆದ ಗೆರೆಯ ಮೂತಿ, ಕ್ಷಾರದಿಂದ ಹೊಳೆವ ಮೋರೆ
ಕೊಂಕುಳಲ್ಲಿ ದೊಣ್ಣೆ ಮೂತಿ, ಡೊಂಕೆ ಇಲ್ಲ—ಬೆಣ್ಣೆ ಮೂತಿ,
ಮೊಸಳೆ ಮುಖ, ಹಸುಳೆ ಮುಖ, ಹೆಸರ ಇಲ್ಲದೆತ್ತಲೊ
ಕನಸಿನಂತೆ ಮಂಜು ಮುಖ, ಬಂಡೆಯಂತೆ ನಂಜು ಮುಖ
ಕತ್ತಲಲ್ಲಿ ಕನಲಿ ಕೆಮ್ಮಿ ಕಾಲಗಾಗಿ ಕಾಯ್ವ ಮುಖ,
ಹೆಣ್ಣು ಮುಖ, ಗಂಡು ಮುಖ; ಹೆಣ್ಣೊ ಗಂಡೊ,—ಒಂದು ಮುಖ;
ಮಸಣ ಗುಡುಗು ಮಂಕು ಕಿಂಕು ಸಿಡುಬು ಪಿಡುಗು—ಎಮ್ಮೆ ಮುಖ
ಪಿಸುಣ ದಾನಿ ರಕ್ತ ಹೀರಿ ಪಿತ್ತ ತುಂಬಿ—ಹೆಮ್ಮೆ ಮುಖ
ಗ್ರಾಮಸಾರಕಾಗಿಯೆ ಸಂಗ್ರಾಮ ಮಾಳ್ಪ ನಾಯಿ ಮುಖ!
ರಾಮ! ಹಾವು ಹರಿವ ಮುಖ, ಕತ್ತಿಯಂತೆ ಇರಿವ ಮುಖ,
ಕೊಂಡಿ ಎತ್ತಿ ಮೆರೆವ ಮುಖ, ಚರಂಡಿಯನ್ನೆ ಸುರಿವ ಮುಖ,
ಕಹಿ ಕಷಾಯ—ಆ ಮುಖ! ನಹಿ ಮಂತ್ರದ ಈ ಮುಖ,
ಕಣ್ಣು ಇದ್ದು ಕುರುಡು ಮುಖ, ಹೆಣ್ಣು ಇದ್ದು ಒಂಟಿ ಮುಖ;

ನುಣ್ಣಗಾದ ಸಿರಿಯ ಮುಖ; ತಣ್ಣಗಾದ ಆಸೆ ಮುಖ;
ಕಾರಕೂನ ಕಾರಿನೊಡೆಯ ಸಾಲವಂತ ಶೀಲವಂತ
ಕೋರೆ ಹಲ್ಲು ಮುರಿದ ಮೂಗು ವಕ್ರದೃಷ್ಟಿ ಕವಿಯು, ಕಪಿಯು,
ಬಡವ ಕಡವ ಕಿರುಬ ಭಾವ ಜೀವಿ ವಿಟನು ವಿಕಟ,
ಮೀಸೆ ಹೊತ್ತ ಮೋಸ ಮುಖ, ಡಾಸ ದಾಸ ಎನುವ ಮುಖ!
ಪೋಲಿ ಹೂಲಿ—ಕೂಲಿ ನಾಲಿ, ಸಾಲಿ ಹುಡುಗ ನಗೆಯ ಮುಖ
ಚಿಕ್ಕಪೇಟೆ ಚೌಕದಲ್ಲಿ ನಿಂತು ನಾನು ನೋಡುತ್ತಿದ್ದೆ
ಅತ್ತ ಇತ್ತ ಸುತ್ತಿ ಸರಿದುಹೋದ ಮುಖಗಳ!

—ಪಾಟೂಳಿ.



# ಸರ—ಸ್ವತೀ ಸೂತ್ರ

ರು ಪ್ರ ವ್ಯ

ಸರಸ್ವತಿ, ಸರಸ್ವತೀ, ಅಂತ ಆ ಡಬ್ಬಿಯೊಳಗಿದ್ದ ಹೆಣ್ಣು ಮಕ್ಕಳು ಅವರ ಪೈಕಿಯ ಒಬ್ಬಳನ್ನೇ ಕೂಗಿ ಮಾತನಾಡಿಸುತ್ತಿದ್ದರು, ನಿಜ.

ಆದರೂ, ನನಗೆ ಮಾತ್ರ ಅವರೆಲ್ಲರೂ ಸರಸ್ವತಿಯರ ಹಾಗೆಯೇ ಕಂಡರು. ಹೌದು. ಮುದುಕಿಯರೂ ಮಧ್ಯ ವಯಸ್ಕರೂ, ಹರೆಯವರೂ, ಹಾಲುಗಲ್ಲದವರೂ-ಎಲ್ಲರೂ, ಮಹಾ ಸರಸ್ವತಿಯರಾಗಿದ್ದರು.

ಅವರ ಮಾತು ಕರ್ಕಶ, ನಾಲಗೆ ತೊದಲು, ಶಾರೀರ ಶರಸಮಾನ, ಗಂಟಲು ಗರಗಸ. ಅವುಗಳಲ್ಲೊಂದರಲ್ಲೂ ಸರಸ್ವತೀ ಲಕ್ಷಣ ತಿಲದಷ್ಟೂ ಇಲ್ಲ.

ಅವರ ಕೊರಳ ಸುತ್ತ, ಸರಗಳಿದ್ದುವು, ಚಿನ್ನದ ಸರಗಳು, ಮೂರೆಳೆ ಆರೆಳೆ ಎಂಟೆಳೆ ಹಗ್ಗಗಳು. "ಎನ್ನನು ಹೊನ್ನಶೂಲದಲಿಕ್ಕಿ ಕೊಲ್ಲುವರಯ್ಯಾ ಎನ್ನನು ಹೊನ್ನ ಹಗ್ಗದಲಿ ನೇಣು ಹಾಕುವರಯ್ಯಾ" ಎಂದು ಆ ಹೆಣ್ಣುಮಕ್ಕಳೂ ಕೈ ಜೋಡಿಸಿ ಕೂಗಿಕೊಳ್ಳಬಹುದಾಗಿತ್ತು. ಕಿವಿ ಕಿತ್ತರೆ ಎರಡು ಸಾವಿರ, ಮೂಗು ಕುಯ್ದರೆ ಮೂರು ಸಾವಿರ, ಬೆರಳು ಕೇಳಿದರೆ ಸಾವಿರದೈನೂರು, ಎಡಗೈಯೊಂದಕ್ಕೆ ಎಂಟುಸಾವಿರ, ಹೆಕ್ಕತ್ತಿನ ಮೇಲೆ ಲೆಕ್ಕಕ್ಕೊಂದೆಂಟುನೂರು ಮೊಣಕೈ ಮೇಲಿನೆಣಿಕೆಗೆರಡುನೂರು ಹೀಗೆ ಹೇರಿ ಕುಳಿತಿದ್ದರು, ಆ ಹೆಂಗಸರು.

ಯಾರ ಸಂತೋಷಕ್ಕೆ, ಅಂತ ನಾನು ಚಿಂತಿಸಿದೆ. ಅವರದೆ? ಅಲ್ಲ. ಅವರಿಗದರಿಂದ ಭಯವೇ ಹೊರತು ಬೇರೆ ಇಲ್ಲ. ಹಿಂದಿನಿಂದ ಯಾರಾದರೂ ಬಂದು ಸರವನ್ನು ಕಿತ್ತಾರು, ಎಂದು ಅವರು ಸೇಪ್ಟಿಪಿನ್ನುಗಳಿಂದ ಅದನ್ನು ಕುಪ್ಪಸಕ್ಕೆ ಸಿಕ್ಕಿಸಿದ್ದರು. ಕೈ ಬಳೆಗಳಲ್ಲೊಂದನ್ನು ಹಿಡಿದೆಳೆದು ಯಾರಾದರೂ ಅಪಹರಿಸಿಯಾರು ಎಂಬ ಭಯಕ್ಕೆ ಅವನ್ನೂ ಎಲ್ಲ ಒಟ್ಟು ನೇರಿಸಿ ಪಿನ್ನು ಹಾಕಿದ್ದರು. ಜಡೆಬಿಲ್ಲೆಯನ್ನು ಮುಸುಕಿ ಮಾಯ ಮಾಡಿದ್ದರು. ಕತ್ತಿನ ಸರಮಾಲೆಯನ್ನೂ ಸೆರಗಿಂದ ಮುಚ್ಚಿ, ಅದರ ತೂಕ ಸಂಖ್ಯೆ ಇವಿಷ್ಟರ ತಿಳುವಳಿಕೆ ಮಾತ್ರ ಪ್ರೇಕ್ಷಕರ ಗಮನಕ್ಕೆ ಬರುವಂತೆ ಮಾಡಿದ್ದರು. ಕತ್ತಲಾದರೆ ಭಯ, ಒಂಟಿ ಕೂತರೆ ಭಯ, ಕಿಟಕಿಯ ಬಳಿ ನೂಕುನುಗ್ಗಲಿಗೆ ಭಯ,

ಹೊಳೆಸ್ತಾನಕ್ಕೆ ಭಯ, ಹೀಗೆ ಬೆದರು ಬಾಳನ್ನು ನಡೆಸುತ್ತಿದ್ದರು, ಆ ಹೆಂಗಸರು.

ಇಂಥ ಒಡವೆಗಳಿಂದ ಹೆಣ್ಣಿನ ರೂಪಿಗೆ ಮೆರುಗು ಕೊಟ್ಟಂತೆ ಎನ್ನುವಿರಾ? ಅದೂ ಸುಳ್ಳು. ಆ ಗಜಕರ್ಣಕ್ಕೆ ಬೆಂಡೋಲೆ ಯಾಕೆ? ಆ ಬೋಳು ತಲೆಗೆ ಜಡೆಬಿಲ್ಲೆ ಯಾಕೆ? ಆ ಉಬ್ಬಸದೆದೆಗೆ ಕಾಸಿನಸರ ಏಕೆ? ಕಾಸ ವಿನಾಶಕ ಔಷಧಿ ಕೊಡಿ, ಒಪ್ಪುತ್ತೇನೆ. ಆ ಅನೀಮಿಯತೋಳಿಗೆ ತೋಳು ಬಂದಿಯೆ? ಉಗುರು ತುಂಬ ಕೊಳೆ, ಉಂಗುರದಿಂದ ಏನು ಬಂತು ಅಲಂಕಾರ? ಮೂಗೊಂದು ಒರಳು; ಅದರಮೇಲೆ, ಒಂದು ಹರಳು! ಅವಲಕ್ಷಣದ ಮುದ್ದೆ, ಅನೇಕ ಒಡವೆಗಳು. ಸರಳವಾದ ಒಡವೆಗಳಿಂದಲೇ ಸೊಬಗು; ಹೇರಳವಾದ ಒಡವೆಗಳನ್ನು ಹೇರುಕಂಬಗಳೇ ಹೊರುವುವು.

ನನಗನ್ನಿಸುತ್ತದೆ, ಇಂಥ ಹೊರಿಜೀವನದಿಂದ ಎರಡು ತರದ ಆನಂದ ಉಂಟಾಗುತ್ತದೆ, ಅಂತ. (೧) ಇದು ಗಂಡಸರಿಗೆ, ಗಂಡಂದಿರಿಗೆ:—ಸಾವಿರಾರು ರೂ ಬೆಲೆ ಬಾಳುವ ಒಡವೆಗಳನ್ನು ಹೊತ್ತು ತನ್ನ ಹಿಂದೆ ಬರುವ ಹೆಂಡತಿಯ ದೆಸೆಯಿಂದ ಸಾವಿರಾರು ರೂಪಾಯಿ ಬೆಲೆಬಾಳುವ ಮೋಟಾರ್ ಕಾರಿನ ಒಡೆತನದ ದೆಸೆಯಿಂದ ಆಗುವಷ್ಟು ಹೆಮ್ಮೆ ಪಡುತ್ತಾನೆ, ಅವಳ ಗಂಡ. ನೋಡಿದಿರಾ ನನ್ನ ಸ್ವಪ್ನ; ನೋಡಿದಿರಾ, ಈ ಮೂಗುತೀನ, ಈ ಮೂಗುತೀನೇ ನನ್ನ ಭಾರ್ಯೆ. ಈ ಚಿನ್ನದ ಸರಗಳನ್ನ, ಇದರಿಂದ ನೀವು ನನ್ನ ಹಿರಿಮೆಯನ್ನು ಊಹಿಸಿಕೊಳ್ಳಿ—ಎಂದು ಆತ ಎಲ್ಲರನ್ನೂ ಮೂದಲಿಸುತ್ತಾನೆ; ಅವರ ಬಾಯಿ ಬಡಿದು ಮೆರೆಯುತ್ತಾನೆ. ಅದಕ್ಕೆ ಸ್ತ್ರೀ ಸಹಕಾರಿ. (೨) ಇದು ಹೆಣ್ಣುಮಕ್ಕಳಿಗೆ, ಹೆಂಡತಿಯರಿಗೆ: ನೋಡಿದಿರಾ, ನನ್ನ ಜಾಣತನ, ನನ್ನ ಕುಶಲತೆಯನ್ನ, ನನ್ನ ಚತುರೋಪಾಯ ಪಾರಂಗತವನ್ನ. ಈ ಬಡಪಶುವನ್ನು ಪೀಡಿಸಿ, ನಾನು ಅವನಿಂದ ಕಸಿದು, ನಿರುಪಯೋಗ ಬಂಡವಾಳವಾಗಿ ಮಾಡಿರುವ ಈ ಚಿನ್ನ ಈ ವಜ್ರ ಈ ರತ್ನ ರಾಶಿ... ಇವೆಲ್ಲ,ನನ್ನ ಸಾಮರ್ಥ್ಯದ ಕುರುಹುಗಳು, ನನ್ನ ವಿಜಯ ಪತಾಕೆಗಳು—ನೀವೇಕೆ ನಿಮ್ಮ ಗಂಡಂದಿರಿಂದ ಇಷ್ಟು ಕೊಳ್ಳೆ ಹೊಡೆಯಲಸಮರ್ಥರಾದಿರಿ?—ಎಂಬ ಮೂದಲಿಕೆ ಅವಳದು. ಇತರ ಹೆಂಗಸರ ಬಾಯಿ ಬಡಿದು ಮೆರೆಯಬೇಕೆಂಬ ಆಸೆ ಅವಳಿಗೆ.

ಇದೇ ಈ ಸರ-ಸ್ವತಿ ತನದ ಗುಟ್ಟು—ಎಂದು ಆ ದಿನ ಆ ಗುಂಪನ್ನು ನೋಡಿದಾಗ ನನಗನ್ನಿಸಿತು.

---

# ಮೂಕ ನಾಟಕ—ಏಕಾಂಕ



ಲಾಯರ್ ತಮ್ಮಯ್ಯನವರ ಮನೆಯ ಒಂದು ಕೋಣೆ; ಲಾ ರಿಪೋರ್ಟುಗಳ ಸಾಲು, ರಂಗದ ಎಡಭಾಗಕ್ಕೆ ಅತಿಥಿಗಳ ಸಾಲು ಭೋಜನಕ್ಕಾಗಿ ಒಬ್ಬರ ಹಿಂದೊಬ್ಬರು, ಟವಲು ಸಹಿತ, ನಿಧಾನವಾಗಿ, ಗಂಭೀರವಾಗಿ, ಹೋಗುತ್ತಿದಾರೆ. ತಮ್ಮಯ್ಯನವರು ನಗುನಗುತ್ತಾ ಅವರೆಲ್ಲರನ್ನೂ ಕೈತೋರಿಸಿ ಮುಂಬರಿಸುತ್ತಿದಾರೆ.

ಎಲ್ಲರೂ ಬಲಗಡೆಗೆ ಹೋಗಿ ಸೇರಿದನಂತರ, ತಮ್ಮಯ್ಯನವರು, ರಂಗದ ನಡುಮಧ್ಯೆ ತಲೆ ಕೆರೆದು ನಿಲ್ಲುತ್ತಾರೆ, ಸರಕ್ಕನೆ ಎದುರಿಗಿರುವ ಬಾಗಿಲು ಮೂಲಕ, ಹಿಂದಕ್ಕೆ ಹೋಗುತ್ತಾರೆ.

ಎರಡು ನಿಮಿಷ ಎಲ್ಲವೂ ಮೌನ.

ನಂತರ, ಎದುರು ಬಾಗಿಲಿಂದ, ಅಡಿಗೆಯವರಸಾಲು ಹೊರಬಂದು, ಬಲಗಡೆ ಬಾಗಿಲ ಮೂಲಕ ಅದೃಶ್ಯರಾಗುತ್ತಾರೆ.

ಕೋಸುಂಬರಿಯಿಂದ ಪ್ರಾರಂಭಿಸಿ, ಅನ್ನ ಸಾರು ಹುಳಿ ಪಲ್ಯ ಹಪ್ಪಳ ಚಿತ್ರಾನ್ನ ಸಾರು ಮಂಡಿಗೆ ಬೋಂಡ ಹಾಲು ಸಕ್ಕರೆ ಖೀರು ಇತ್ಯಾದಿ ತುಂಬಿದ ಪಾತ್ರೆಗಳೂ ತಟ್ಟೆಗಳೂ ಸಾಲಾಗಿ ಬರುತ್ತವೆ, ಹೋಗುತ್ತವೆ, ಖಾಲಿಯಾಗಿ ಹಿಂತಿರುಗುತ್ತವೆ. ತಮ್ಮಯ್ಯನವರ ಓಡಾಟ, ಬಹಳ.

ಖೀರನ್ನು ಹೊತ್ತು ತರುವ ಅಡಿಗೆಯವನೊಬ್ಬನೇ ರಂಗಸ್ಥಳದಲ್ಲಿ. ಆಗ, ಎಡಗಡೆಯಿಂದ ಒಬ್ಬ ಪೋಲೀಸ್ ಇನ್‌ಸ್ಪೆಕ್ಟರೂ ನಾಲ್ಕು ಕಾನ್‌ಸ್ಟೆಬಲ್‌ಗಳೂ ಪ್ರವೇಶಿಸಿ, ಅವನನ್ನು ಹಿಡಿದು ನಿಲ್ಲಿಸುತ್ತಾರೆ. ಪಾತ್ರೆಯನ್ನು ಮೂಸಿ ನೋಡುತ್ತಾರೆ. ಎಷ್ಟು ಜನರು ಊಟಕ್ಕೆ ಬಂದಿದಾರೆ ಎಂದು ಕೇಳುತ್ತಾರೆ. ಅವನು ೧೦೦ ಎಂದು ಬೆರಳು ತೋರಿಸುತ್ತಾನೆ. ಪೋಲೀಸಿನವರು ಕೋಪಾವೇಶರಾಗಿ, ಬಲಗಡೆ ರೂಮಿಗೆ ಧಾವಿಸುತ್ತಾರೆ. ಅಡಿಗೆಯವನು ಗಾಬರಿಗೊಂಡು ಎದುರು ರೂಮಿಗೆ ಓಡುತ್ತಾನೆ.

ಐದು ನಿಮಿಷ ಮೌನ. ನಂತರ, ಎಂಜಿಲು ಕೈ ಸಹಿತ ತೇಗುತ್ತ ತೂಗುತ್ತ ಅತಿಥಿಗಳೆಲ್ಲ ಸಾಲಾಗಿ ಹೊರಗೆ ಬರುತ್ತಾರೆ, ಎಡದಿಂದ ಬಲಕ್ಕೆ. ಟವಲುಗಳೆಲ್ಲ ಜಾರಿ ಬೀಳುವುವು

ಎಲ್ಲರ ಹಿಂದೆ, ತಾವೂ ತೇಗುತ್ತ, ಎಂಜಲು ಕೈ ಬೀಸಿಕೊಂಡು. ಪೋಲೀಸ್ ಇನ್‌ಸ್ಪೆಕ್ಟರೂ, ಕಾನ್‌ಸ್ಟೇಬಲುಗಳೂ ಬರುವರು. ಅವರೂ ಬಲಗಡೆ ಬಾಗಿಲ ಮೂಲಕ ಮಾಯವಾದಮೇಲೆ ಪರದೆ ಬೀಳುವುದು.

—o—



ಟೀ ಷಣ್ಣತಿಗಳು....ಶುಡು ತಣ್ಣಯೋ ಇಲ್ಲಯೋ ?

# ಬಿಸಿಬಿಸಿ ಕಾದಂಬರಿ

★ ತ್ಯಾಗಿ ★

೪೨! ಎಂಥ ಪ್ರಚಂಡ ತಾಂಡವಯುಗ! ಬ್ರಿಟಿಷ್ ಚಕ್ರಾಧಿಪತ್ಯದ ಕಾಲಭೈರವನಿಗೆ ಚೇಳು ಕುಟಿಕಿದ ಯುಗ! ನಾವು ಕಂಬಿ ಕಿತ್ತು, ಪರಂಗಿಯವರನ್ನು ಕಂಬಿ ಕೀಳಿಸಿದ ಮಹಾ ಕ್ರಾಂತಿಯ ಸಂಕ್ರಾಂತಿ ಸಮಯ! ಆಗ ನಾನೂ ಒಂದು ಪೋಲೀಸ್ ವ್ಯಾನಿನಲ್ಲಿ ಎರಡು ಮೈಲಿ ಉಚಿತ ಪ್ರಯಾಣ ಮಾಡಿ, ದೇಶಕ್ಕೆ ಕಾಣಿಕೆ ತೆತ್ತೆ; ಅಹಿಂಸಾಯುತ ಸಂಗ್ರಾಮದಲ್ಲಿ ವೀರಯೋಧನೆನಿಸಿದೆ. ಆದರೆ, ೪೭ರೊಳಗೆ, ದೇಶ ನನ್ನನ್ನು ಮರೆಯಿತು. ನನಗೆ ಮಂತ್ರಿ ಪದವಿ ದೊರೆಯಲಿಲ್ಲ; ಗ್ರಾಮ ಸಮಿತಿಗೂ ಕೂಡ ನನಗೆ ನಾಮಕರಣ ದೊರೆಯಲಿಲ್ಲ; ಇಪ್ಪತ್ತೆಕ್ರೆ ಜಮೀನೂ ನನ್ನ ಪಾಲಿಗೆ ಇಲ್ಲವಾಯಿತು; ಬಟ್ಟೆ ಮಾರಲು ಲೈಸನ್‌ಸೂ ಸಿಗಲಿಲ್ಲ; ನನ್ನ ಬಟ್ಟೆ ನಾನೇ ಅರಸಬೇಕಾಯಿತು. ಅಲೆದು ಅಲೆದು ಅರ್ಜಿ ಬರೆದು ಹೂವು ಹಣ್ಣು ಅರ್ಪಿಸಿ ನಾನು ಇದ್ದದ್ದೂ ಪಾಪರಾದೆ.

ನನಗೆ ಉಳಿದಿರುವುದಿನ್ನೊಂದೇ ದಾರಿ; ಸಾಹಿತ್ಯ ನಿರ್ಮಾಣ. ೪೨ರ ಸಾಹಿತ್ಯ, ೪೨ ರಿಂದ ೪೭ರ ವರೆಗಿನ ಧರ್ಮಯುದ್ಧದ ವಿವರಣೆ; ಕಾದಂಬರಿ ನಿರ್ಮಾಣ; ಮುಂದಿನ ಜನಾಂಗ ಇಂದಿನ ಜನಾಂಗಕ್ಕೆ ಎಷ್ಟು ಋಣಿ ಎಂಬುದನ್ನು ಕನ್ನಡದಲ್ಲಿ ಬರೆದಿಟ್ಟು, ನನ್ನಂಥ ವೀರ ಯೋಧನಿಗೆ ನಾನೇ ನನ್ನ ಗೋರಿ ಎಬ್ಬಿಸುವುದೇ ಸೂಕ್ತ; ಸಂಪಾದನೆಗೆ ಮಾರ್ಗ; ಆದನ್ನಾದರೂ, ಒಂದೊಂದು ಪಂಚಾಯಿತಿಗೊಂದರಂತೆ ಕೊಂಡುಕೊಳ್ಳಲು ಆರ್ಡರ್ ಮಂಜೂರಾಗದೆ?

ಕಾದಂಬರಿ ಬರೆಯುವುದೇನೋ ಬಹು ಸುಲಭ ಎಂದು ನನ್ನ ಮಿತ್ರರೊಬ್ಬರು ನನಗೆ ಹೇಳಿ ಉತ್ತೇಜನ ಕೊಟ್ಟರು. "ನನ್ನ ಗ್ರಂಥ ನಾಲ್ಕು ಓದಯ್ಯ, ಸಾಕು" ಎಂದು ಅವರು ನನಗೆ ಸೂಚನೆ ಕೊಟ್ಟರು.

ಓದಿದೆ. ಹೌದು, ಬಹು ಸುಲಭ—ಎಂದು ನನಗೂ ಅನ್ನಿಸಿತು. ಅವರ ಗ್ರಂಥಗಳಿಂದ ನನಗೆ ಕಾದಂಬರೀ ಶಾಸ್ತ್ರದ ಮೂಲ ಸೂತ್ರ ತಿಳಿದುಹೋಯಿತು. ಅಶ್ಲೀಲವಿಲ್ಲದ ಕಾದಂಬರಿ ಬರಿಯ ಕಗ್ಗ ಎಂದು ನಾನು ಮನಗಂಡೆ. ಪ್ರತಿ ಅಧ್ಯಾಯದಲ್ಲೂ ಮೂರು ವ್ಯಭಿಚಾರ ಇದ್ದೇ ಇರಬೇಕು. ಪ್ರತಿ ಮನೆ

ಯೊಳಕ್ಕೂ ಒಬ್ಬ ಜಾರ ಪುರುಷ ಇಣಿಕಿ ನೋಡಲೇಬೇಕು. ಆಗ ಮಾತ್ರ ಕಥೆಗೆ ಸ್ವಾರಸ್ಯ, ಕಥೆಗಾರನಿಗೆ ಮನ್ನಣೆ, ಕೈ ತುಂಬ ಕಾಸು, ಎಂದು ತಿಳಿದುಕೊಂಡೆ.

ಆದರೆ, ಪವಿತ್ರತಮವಾದ ಆ ಸ್ವಾತಂತ್ರ್ಯ ಸಮರದ ಗಾಂಧೀ ತತ್ವ ಎಲ್ಲಿ? ಕೊಚ್ಚೆ ಗುಂಡಿಯ ದುರ್ನಾತ ಪೂರಿತ ಈ ಬ್ರಾಂದೀ ತತ್ವ ಎಲ್ಲಿ? ಎಂದು ಶಂಕಿಸಿವೆ. ಇವೆರಡನ್ನೂ ಮಿಶ್ರಮಾಡದೆ, ನನ್ನ ಕಾದಂಬರಿ ಮಾರಾಟವಾಗದು ಎಂದು ಅನೇಕರು ಹಿರಿಯರು ನನಗೆ ಬುದ್ಧಿವಾದ ಹೇಳಿದರು. ಒಂದೆರಡು ಬಚ್ಚಲು ಚಿತ್ರಗಳನ್ನೂ ಪುಸ್ತಕಕ್ಕೆ ಸೇರಿಸೋ ಹಾಗಾದರೆ, ಅದು ನಿಜಕ್ಕೂ ವಿದ್ಯಾರ್ಥಿ ಕರಭೂಷಣವಾಗುತ್ತದೆ ಎಂದು ಒಬ್ಬರು ಸೂಚನೆ ಕೊಟ್ಟರು.

ಸರಿ, ಬರೆದೆ. ಅಶ್ಲೀಲ ನಾಯಕರನ್ನೆಲ್ಲ ಪೋಲೀಸ್ ಇಲಾಖೆಗೆ ಸೇರಿಸಿದೆ. ವ್ಯಭಿಚಾರ ವೃತ್ತಿಯವರನ್ನೆಲ್ಲ ಬ್ರಿಟಿಷ್‌ನವರ "ಪಂಚಮ ದಳ" ಎಂದೆ. ಸರಿ, ಪುಟಪುಟಕ್ಕೂ ಕೊಚ್ಚೆ ತುಂಬಿದೆ. ಇಂಗ್ಲೆಂಡ್, ಫ್ರಾನ್ಸ್, ಇಟಲಿ ಮುಂತಾದ ದೇಶಗಳಲ್ಲಿ ಉತ್ತಮವೆನಿಸಿದ ಪರಂಗಿ ಚರಂಡಿಗಳಿಂದಲೂ ಕೊಂಚ ಕೊಂಚ ಕೊಚ್ಚೆ ಕದ್ದೆ. ನಾಯಕನಾಗಿ ನಾನೇ ನಿಂತೆ. ಪೋಲೀಸ್ ವ್ಯಾನ್ ಪ್ರಯಾಣವನ್ನೇ ೨೦ ಪುಟ ಹಿಗ್ಗಿಸಿದೆ; ದಾರಿಯುದ್ದಕ್ಕೂ ಅತ್ಯಾಚಾರ ಬೆಳೆಸಿದೆ. ಲಂಗು ಲಗಾಮಿಲ್ಲದೆ ಅಯೋಗ್ಯರ ಆಡ್ಡಾಟವನ್ನೆಲ್ಲ ಇದ್ದಕ್ಕಿದ್ದಂತೆ ಬರೆದೆ. ಬರೆದದ್ದನ್ನ ಓದಿ ನೋಡಲು ನನಗೇ ನಾಚಿಕೆ. ಮೊನ್ನೆ, ಅಚ್ಚಿಗೆ ಹಾಗೆಯೇ ಕೊಟ್ಟೆ, ಓದಿ ನೋಡದೆಯೆ! ಹೊರಬರಲಿ, ನೋಡುತ್ತೀರಿ! ಹೇಗೆ ಖರ್ಚಾಗುತ್ತದೆ ಅಂತ!





# ಆಹ್ವಾನದ ಅಂತರಂಗ

ಟಿ. ಸುನಂದಮ್ಮ

ಅದೊಂದು ಟೀಪಾರ್ಟಿ; (ಕೊಟ್ಟಿದ್ದೇನೋ ಕಾಫಿ!) ನನಗೂ ಆಹ್ವಾನ ಬಂದಿತ್ತು. ಹೇಗೆ ಬಂತೋ ನನಗೇ ಸಂಶಯ! ಅಧಿಕಾರಿ ಅರ್ಧಾಂಗಿಯಲ್ಲ. ಮಿನಿಸ್ಟರ್ ಮಗಳ ನಾದಿನಿಯಲ್ಲ, ಮುನಿಸಿಪಲ್ ಮೆಂಬರ ಮೊಮ್ಮಗಳಲ್ಲ. ಯಾವ ರಾಜಕೀಯ ತಾರೆಯು ತಾತನಿಗೂ ಸಂಬಂಧವಿಲ್ಲ! ಅಂದಮೇಲೆ....? ನನ್ನ ಒಂದೇ ಒಂದು ಹಿರಿತನವೆಂದರೆ, 'ಹಿಡಂಬೀ' ಪತ್ರಿಕೆಗೆ ಬರೆದಿದ್ದ ಎರಡು ಲೇಖನಗಳು! ಅಷ್ಟಕ್ಕೇ ಆಹ್ವಾನವೇ ಎಂದು ಅಚ್ಚರಿಗೊಂಡೆ. ಹೇಗೂ ರೇಷನ್ ಕಾಲ, ಬಿಟ್ಟರೆ ಸಿಕ್ಕದು ಎಂದು ಚಿತ್ತೈಸಿದೆ.

ದುಂಡುಮೇಜಿನ ಸುತ್ತ ಸೋಫಗಳು, ಮೇಜಿನತುಂಬ ಗಾಜಿನ ತಟ್ಟೆ ಬಟ್ಟಲುಗಳು. ಮಧ್ಯೆ, ಹೂಧಾನಿಯ ಮಗ್ಗುಲಿಗೆ, ಮರಿ ತಟ್ಟೆಯೊಂದರ ಮೇಲೆ ಥಳ್ಳನೆ, ನಾಜೂಕಾದ ಚಿತ್ರ ಬರೆದ ಕಾಗದದ ಹಾಳೆ ಮುಚ್ಚಿತ್ತು. ನಾನೂ ಕುಳಿತ ಮೇಜಿನ ಒಂದು ಸೋಫದಲ್ಲಾಗಲೇ ಇಬ್ಬರು ಮಹಿಳೆಯರು ಮಂಡಿಸಿದ್ದರು. ಅವರ ಕಣ್ಗಳು, ಮುಚ್ಚಿದ್ದ ಮರಿ ತಟ್ಟೆಯಲ್ಲಿ ನಟ್ಟುಹೋಗಿದ್ದುವು. ನಾನೂ ಎದುರು ಸೋಫದಲ್ಲಿ ಕುಳಿತು, ಅವರೊಂದಿಗೆ ಕಣ್ಣು ಬೆರೆಸಿದೆ.

ಇಷ್ಟರೊಳಗೆ, ಸ್ಥೂಲದೇಹಿಯಾದ ಸ್ತ್ರೀರತ್ನವೊಂದು ನನ್ನ ಪಕ್ಕಕ್ಕೆ ಧಾವಿಸಿತು. ಆಕೆ ಸೋಫದಲ್ಲಿ ಕುಳಿತ ರಭಸಕ್ಕೆ ನಾನು ಪುಟ ಹಾಕಿದ ಚೆಂಡಿನಂತೆ ಮೇಲಕ್ಕೆಗರಿದೆ! "ಅಯ್ಯೋ ಪಾಪ, ಪೆಟ್ಟಾಯಿತೆ? ತ್ಸುತ್ಸುತ್ಸುತ್ಸು! ಕೂತುಕೊಳ್ಳಿ" ಎಂದುಪಚರಿಸಿದಳು ಆ ದಯಾಮಯಿ, ಸೋಫದಲ್ಲುಳಿದಿದ್ದ ಅರಂಗುಲವನ್ನು ತೋರುತ್ತ! ಎದುರಿಗಿದ್ದ ಲಲನಾದ್ವಯ ಮುಸಿ ಮುಸಿ ನಗಲಾರಂಭಿಸಿತು. ನನ್ನ ಸೋತ ಮುಖದಲ್ಲಿ ಸ್ನೋ ಕರಗಿ ಹರಿಯಲಾರಂಭಿಸಿತು.

'ನಯವಾತಿ' ನಾಕೆ ಮಗ್ಗುಲ ಮಹಿಳಾ ಮಣಿ "ಕೂತ್ಕೊಂಡ್ರಾ!.... ಉಶ್...... ತಡವಾಗಿಬಿಡ್ತು ಬರೋಕ್ಕೆ........ನನಗೆಲ್ಲಿ ಪುರುಸತ್ತು!....... ....

ನಾನು ಯಾರು ಅನ್ನೋದು ನಿಮಗೆ ತಿಳೀದು ಅಲ್ವೇ?....... ಹೋಗಲೇಳಿ. ನಾನೇ ಪರಿಚಯ ಮಾಡ್ಕೊಡ್ತೀನೆ. ನನ್ನ ಹೆಸ್ರು ಡಿ. ಡಿ. ಗೀತಾದೇವೀ. ಅನ್ವರ್ಥನಾಮ 'ಧ. ಡಿ. ಗೀ' ಅಂತ. ಯಜಮಾನ್ರು ಧರಂಪಟ್ಟದ ಧೃವ ರಾಯ—ಅದಕ್ಕೇ ಬರಿಯೋದಕ್ಕೆ, ಈ ಹೆಸ್ರು ಇಟ್ಕೊಂಡಿದೀನಿ. ಓದಿಲ್ವೇ ನೀವು, 'ಹಿಡಂಬೀ'ಗೆ ತಪ್ಪದೇ ಬರೀತೀನಲ್ಲಾ?"

"ಆ? 'ಹಿಡಂಬೀ'ಗೆ?....ನಾನೂ ಬರೆದಿದ್ದೇನೆ!"

"ಅಹಾ? ಹೆಸ್ರು ನಿಮ್ಮದು?

"ಕಮಲಾಬಾಯೀ"

"ಓಹೋ ಕಮಲಾಬಾಯೀ ನೀವು? ತ್ಸುತ್ಸುತ್ಸುತ್ಸು, ಯಾರೋ ಅಂತಿದ್ದೆ! ಹೊರಿ ಸಂತೋಷವಾಯ್ತು ನಿಮ್ಮನ್ನ ಕಂಡದ್ದು....ಹಹಹಹ!...." ಆಕೆ ತನ್ನ ಹೊರೆಹಿಗ್ಗನ್ನು ಅಕ್ಷರಶಃ ತೋರಿಸಲು ತನ್ನ ಹೊರೆ ಕೈಗಳಲ್ಲಿ ನನ್ನ ಕಿರುಗೈಗಳನ್ನು ಹುದುಗಿಸಿ, ಹಿಸುಕಿದಳು. ನೋವಾದರೂ ಕಣ್ಣೀರು ಸುರಿಸದೆ ಹಲ್ಲುಕಿರಿದೆ. ನಗುತ್ತಿದ್ದ ನಾರಿಯರ ಜೋಡಿಯನ್ನು ಗರ್ವದಿಂದ ನೋಡಿದೆ, ಹೆಮ್ಮೆಯಿಂದ ನನ್ನ ಹೃದಯ ಉಬ್ಬಿತು, ಮುಖವರಳಿತು, ಕರಗಿದ್ದ ಸ್ನೋ ಹೆಪ್ಪುಗಟ್ಟಿತು! ನಾನು ಬರೆದಿದ್ದ ಲೇಖನಗಳೆಂದರೆ, ಒಂದು—'ಮೌನಗೌರೀ ವ್ರತಾಚರಣೆ'—ನಮ್ಮಜ್ಜಿ ಕಿವಿಹಿಂಡಿ, ಮೂಗುಮುಚ್ಚಿಸಿ, ಮಾಡಿಸಿದ್ದುದ ರಿಂದ ಅನುಭವದಮೇಲೆ ಬರೆದದ್ದು, ಎರಡನೆಯದು 'ಅವಲಕ್ಕೀ ಸಂಡಿಗೆ ಹಾಕುವ ವಿಧಾನ' (ಅದೂ ಅನುಭವಾಮೃತ ಎಂದು ಹೇಳಬೇಕಾದ್ದೇ ಇಲ್ಲ!) ಅಷ್ಟಕ್ಕೇ ಈ ಆದರ, ಗೌರವ! ನಾಲ್ಕೂಕಾಲಡಿ ಶರೀರ ಆರಡಿ ಆದಂತೆ ತೋರಿತು ನನಗೆ, ಆ ಸಮಯಕ್ಕೆ ಮೇಳ ವಾದ್ಯದವರು ನುಡಿಸುತ್ತಿದ್ದಂತೆ 'ಮೈ ಕ್ಯಾ ಜಾನು ಕ್ಯಾ ಜಾದು ಹೈ' ಎಂದುಕೊಂಡೆ.

ಆಕೆ, ತನ್ನ ಹಿಗ್ಗಿನ ಹೊನಲಿನಲ್ಲಿ ತಟ್ಟೆಯ ಮೇಲಿನ ಥೆಳುಹಾಳೆಯನ್ನು ಥಟ್ಟನೆ ತೆರೆದು, ಇಟ್ಟಿದ್ದ ನಾಲ್ಕು ಭೋಂಡ ಎಂಟು ಚಮಚ ಚೌಚೌನಲ್ಲಿ, ಮೂರು ಭೋಂಡ, ಮುಕ್ಕಾಲು ಪಾಲು ಚೌಚೌ ಬಗ್ಗಿಸಿಕೊಂಡು ತಿನ್ನಲಾರಂ ಭಿಸಿದಳು. ಎದುರು ಸೋಫದ ಹೆಂಗಳು ಆತುರ ದೃಷ್ಟಿಯನ್ನು ನನ್ನಡೆಗೆ ಬೀರಿ ದರು!

"ನೋಡಿದರಾ. ದೈವೇಚ್ಛೆ! ನಮ್ಮಿಬ್ಬರನ್ನೂ ಒಂದು ಕಡೆ ಸೇರಿಸಿತು! ತ್ಸುತ್ಸುತ್ಸುತ್ಸು" ಎಂದಳು ನನ್ನ ಸಹಲೇಖಿಕಿ ತಿಂಡಿ ತುರುಕುತ್ತ. "ನೀವು ನನ್ನ 'ಪತಿಯೂ ಪರ್ಸೂ', 'ಸ್ತ್ರೀಯೂ ಸೀರೆ ಜರಿಯೂ" ಮೊದಲಾದ ಲೇಖನ

ಗಳನ್ನೂ, 'ಪೌಡರ್ ಪಫ್', ಪಟಿಕದ ಹೂವಿಗೆ' ಇತ್ಯಾದಿ ಕವನಗಳನ್ನೂ ಓದಿದ್ದೀರಿತಾನೇ?........ಅಂದಹಾಗೆ, ನಿಮ್ಮ 'ಹೆಗ್ಗಣವ್ವೋ ಮೈದನೋ' ಪದ್ಯಕ್ಕೆ ನಾನು 'ಅತ್ತೆಯೋ ಆನೆಯೋ' ಪ್ರತ್ಯುತ್ತರ ಬರೆದಿದ್ದೇ ನೋಡಿದಿರಾ! ಹೇಗಿತ್ತು! ನನ್ನ 'ಜೋಳದಜ್ಜಿ ಜರ್ಬಿ'ಗೆ ನಿಮ್ಮ 'ತೌಡಿನ ತಾಳ್ಮೆ' ಉತ್ತರಿಸಿದಿರಲ್ಲಾ ಅದು ಅದರ ಕಾಲು ಬಾಲವಾದೀತೇ?"

"ಆ!....ಆ?.......!" ಕಣ್ಣು ಕಣ್ಣುಬಿಟ್ಟೆ. ಆಕೆ ಮಾತಿನ ಭರದಲ್ಲಿ ಜರುಗುತ್ತ ಜರುಗುತ್ತ ನನ್ನ ಮೇಲೇ ಬೀಳಲಾರಂಭಿಸಿದಳು. ಸೋಫದ ಸ್ಪ್ರಿಂಗುಗಳು 'ಕುಯ್ಯೋ' ಎಂದು ಕಿರಲಿದುವು.

"ಅಲ್ಲ....ನಾನು....ಯಾವಾಗ...?"

"ಸರಿ ಬಿಡಿ, ಚೆನ್ನಾಗೇನೋ ಬರೀತೀರಿ ನೀವೂನ್ನಿ. ಆದರೂ ನನ್ನ ಮುಂದೆ....ನಿಮ್ಮ....ಹಹಹಹ! ನನ್ನ 'ಮಹಿಳೆಯೂ ಮನೆಯಾತನ ಗೋಳೂ'ಗೆ ಎಲ್ಲಿ, ಜವಾಬು ಕೊಟ್ರಾ....?"

ಮೇಳವಾದ್ಯ 'ತುಮ ಡೂಬಗಯೀ, ಅಬರಾಹ ಕ್ಯಾ ಹೈ' ಬಾಜಿಸುತ್ತಿತ್ತು. ಅದಕ್ಕಿಂತ ಜೋರುಧ್ವನಿಮಾಡಿ ಅರಚಿದೆ.

"ನಾನಲ್ಲ ಆ ಲೇಖನಗಳನ್ನ ಬರೆದವಳು!"

"ಹಾ! ನೀವಲ್ಲವೇ?....ಹಾಗಾದ್ರೆ....ನೀವು....ಕಾ. ರಾ. ಕಮ್ಲಾ ಅಲ್ವೇ"

"ಅಯ್ಯೋ ಅಲ್ಲ! ನಾನು ಸೀ. ಯೀ. ಕಮ್ಲಾ!"

"ಹಾ!! ಹಾರಿದಳಾಕೆ. ನಾನು ಮತ್ತೊಮ್ಮೆ ಎರಡಡಿ ಭಂಗನೆ ನೆಗೆದು ಕುಕ್ಕರಿಸಿದೆ!

ಆಗರಿತೆ ಆಹ್ವಾನದ ಅಂತರಂಗಾನ!

---

# ಹೊಸಲು ದಾಟಿದ ಹುಡುಗ

★ ಗಂಗಾಧರ ★

ಪುಟ್ಟಪಾಪು ನಡೆಯುವುದು ಕಲಿತಾಗ, ಒಂದು ದಿನ ಹೊಸಲು ದಾಟು ವುದಕ್ಕೆ ಹೋಗಿ, ಕೆಳಕ್ಕೆ ಬಿದ್ದ. ಕಿಟೋ ಅಂತ ಕಿರಿಚಿದ. ಅಲ್ಲೇ ನೆಲದ ಮೇಲೆ ಬಿದ್ದಿದ್ದ, ಅವನ ತಂದೆ ಬಂದು, ಎತ್ತಿ ಮುದ್ದಾಡುವತನಕ! ಅವನ ತಂದೆ ಓಡೋಡಿ ಬಂದು, ಮಗುವನ್ನು ಮೇಲೆತ್ತಿ ಸಂತೈಸಿದರು. ಆದರೆ, ಅವರು ಅಷ್ಟುಮಾತ್ರ ಮಾಡಿದ್ದರೆ ಚೆನ್ನಾಗಿತ್ತು. ಹಾಗೆ ಮಾಡಲಿಲ್ಲ. ಒಂದು ತಪ್ಪುಮಾಡಿದರು. ಒಂದು ಬೆಪ್ಪು ಆಡಿದರು. ಅದರಿಂದ, ಪುಟ್ಟಪಾಪುವಿನ ಮುಂದಿನ ಬದುಕೇ ಬದಲಾಯಿತು.

ಪುಟ್ಟಪಾಪು ಬಿದ್ದದ್ದು, ಅವನದೇ ತಪ್ಪು, ಅವನ ಬೇಹುಷಾರಿತನವೇ ಅದಕ್ಕೆ ಕಾರಣ, ಎಂದು ತಿಳಿದಿದ್ದರೂ, ಅವನ ತಂದೆ, ಹೊಸಲನ್ನು ಬೈದರು, ಅದನ್ನು ಕೋಲಿಂದ ಹೊಡೆದರು. 'ಇನ್ನುಮೇಲೆ, ನನ್ನ ಪುಟ್ಟಪಾಪೂನ ಬೀಳಿಸಿದರೆ ನೋಡು, ಬಲಿಹಾಕಿಬಿಡುತ್ತೇನೆ' ಎಂದೆಲ್ಲ ಹೊಸಲಿನ ಮೇಲೆ ರೇಗಾಡಿದರು. ಪುಟ್ಟಪಾಪು ಅಳು ನಿಲ್ಲಿಸಿದ. ಅವನ ಪ್ರತಿಷ್ಠೆ ಹೆಚ್ಚಾಯಿತು. ತನಗಾಗೋ ಎಲ್ಲ ಕಷ್ಟನಷ್ಟಗಳಿಗೂ ಇತರರೇ ಕಾರಣ ಹೊರತು ತಾನಲ್ಲ, ಎಂದು ಪುಟ್ಟಪಾಪು ಗಟ್ಟಿಮಾಡಿಕೊಂಡ.

ಆರು ವಯಸ್ಸಿನಲ್ಲಿ ಅವನಿಗೆ ಅಜೀರ್ಣರೋಗ ಬಂತು, ಅದಕ್ಕೆ ಅಂಗಾರಕನೇ ಕಾರಣ, ಎಂದು ಅವನ ಅಪ್ಪ ಹೇಳಿದರು. ಎಂಟು ವರ್ಷಕ್ಕೆ ಅವನು ಸೈಕಲಿಂದ ಬಿದ್ದು ಕೊಂಚ ಕಾಲ ಕುಂಟಿದ ಅದಕ್ಕೆ ಅವನ ಪಕ್ಕದ ಮನೆ ಹುಡುಗನೇ ಕಾರಣ ಎಂದು ಪುಟ್ಟಪಾಪು ವಾದಿಸಿ ಸಾಧಿಸಿದ. ಹತ್ತಕ್ಕೆ ಲೋವರ್ ಸೆಕಂಡರಿ ಗೋತ ಹೊಡೆದ, ಅವನ ಟ್ಯೂಷನ್ ಮಾಸ್ತರ ದೆಸೆಯಿಂದ. ರೈಲು ತಪ್ಪಿದರೆ, ಗಾರ್ಡೇ ತಪ್ಪಿತಸ್ಥ; ಮರದಿಂದ ಬಿದ್ದರೆ, ಕೊಂಬೆಯೇ ಕಾರಣ; ಕಿಸೆಯಿಂದ ಯಾವನಾದರೂ ಕಾಸು ಅಪಹರಿಸಿದರೆ,

ಕೋಟು ಹೊಲಿದುಕೊಟ್ಟ ದರ್ಜಿಯೋ ತಪ್ಪಿತಸ್ಥ; ಬಿ. ಎ. ಬರದೆ ಇದ್ದದ್ದು ಪರೀಕ್ಷಕರ ಹೊಟ್ಟೆಕಿಚ್ಚಿನಿಂದ ಹೊರತು ಬೇರೆ ಅಲ್ಲ; ಕ್ರಿಕೆಟ್‌ನಲ್ಲಿ ರನ್ ಹೊಡೆಯಲು ಆಗದೆ ಇದ್ದದ್ದು ಅಂಪೈರ್ ಆ ಕಡೆಯವನಾದ್ದರಿಂದ—ಹೀಗೆ ಪುಟ್ಟಪಾಪು ಜಗತ್ತನ್ನೇ ದೂರಿ, ತಾನು ನಿರಪರಾಧಿ ಎಂದು ಸಾಧಿಸಿದ. ಅಪ್ಪನ ಆ ಅಂದಿನ ಅವಿವೇಕದ ಬಲದಿಂದ, ತಾನು ಸರ್ವಜ್ಞ, ಸರ್ವಶಕ್ತ, ಆದರೆ, ಇತರರ ದಡ್ಡತನ ಬಲಹೀನತೆ ಇವುಗಳಿಂದ ತನ್ನ ಪ್ರತಿಭೆ ಜಗತ್ತಿಗೆ ಕಾಣಿಸದು, ಎಂದು ಮರುಗಿದ.

ತನಗೆ ವೋಟು ದೊರೆಯದೆ ಇದ್ದದ್ದು ಎದುರಾಳಿಯ ಕುಹಕ, ಎದುರು ಪಕ್ಷದ ಮೋಸ, ವೋಟು ತುಂಬೋ ಪೆಟ್ಟಿಗೆ ಬಾಯಿ ಚಿಕ್ಕದಾಗಿದ್ದುದರಿಂದ, ಪೋಲಿಂಗ್ ಬೂತು ಪೂರ್ವಕ್ಕೆ ತಿರುಗಿದ್ದರಿಂದ—ಇತ್ಯಾದಿ ವಾದಿಸಿದ. ಅಸೆಂಬ್ಲಿ ಮೆಂಬರೂ ಆದ, ಅವನು ಕಡೆಗೆ. ಅಲ್ಲಿಯೂ ಇದೇ ಗೋಳು. ಕಂಡವರನ್ನೆಲ್ಲ ದೂರಿ ತನ್ನ ತುತೂರಿ ಊದುವುದು. ನಮಗೆ ಆಹಾರ ಕಡಿಮೆಯಾಗಿರುವುದೇಕೆಂದರೆ, ಅಮೇರಿಕನರ ಅಭಿಮಾನ ಶೂನ್ಯತೆ; ಬೆಲ್ಲಕ್ಕೆ ಏಕೆ ಇಷ್ಟು ಬೆಲೆ, ಎಂದರೆ, ಡಿಲ್ಲಿಯವರು ಮಾಡಿದ ಅವಿವೇಕ; ರೈಲ್ವೆ ಚಾರ್ಜುಗಳನ್ನೇಕೆ ಏರಿಸಬೇಕೆಂದರೆ, ಪಾಕಿಸ್ಥಾನದವರಿಗೆ ಬುದ್ಧಿ ಇಲ್ಲ, ವಿದ್ಯಾರ್ಥಿಗಳಲ್ಲಿ ವಿನಯ ಕಡಿಮೆಯಾಗಿರೋದು ಏಕೆಂದರೆ, ಬೆಂಚು ಕುರ್ಚಿಗಳು ಒರಟಾಗಿವೆ—ಇತ್ಯಾದಿಯಾಗಿ ಭಾಷಣ ಮಾಡುವನು. ತನಗೆ ತಕ್ಕ ಅಧಿಕಾರ ಸಿಗದೆ ಇರುವುದಕ್ಕೆ ತನ್ನ ತಪ್ಪು ರವೆಯಷ್ಟೂ ಇಲ್ಲ, ಎಲ್ಲ ಮಂತ್ರಿಗಳ ಕುಹಕ, ಅವರ ಕಿವಿ ನುಲಿಚುವವರ ಕುತಂತ್ರ, ಎಂದು ಇವತ್ತಿಗೂ ಸಾರುತ್ತಿದಾನೆ.

ಪ್ರಪಂಚದಲ್ಲಿ, ಯಾರು ಏನು ಅವಿವೇಕಮಾಡಿದರೂ, ಅದು ಅವರ ತಪ್ಪಲ್ಲ, ಮತ್ತೊಬ್ಬರದು—ಎಂದು ಪ್ರಚಾರ ಮಾಡಲು ಅವನು ನಾಳೆ ಒಂದು "ವಾರ ಪತ್ರಿಕೆ" ಪ್ರಾರಂಭಿಸುತ್ತಾನಂತೆ. ಅದಕ್ಕೆ ಏನು ಹೆಸರಿಡಬೇಕು, ಬಲ್ಲಿರಾ?

"ಹೊಸಲು" ಎಂದಿಡುವುದೇ ಉತ್ತಮ, ಎಂಬುದೇ ನನ್ನ ಸಲಹೆ.



# ದೀಕ್ಷಾಗೀತೆ

---

[ಜನವರಿ ೨೬ರಂದು ಕೇವಲ ದೊಡ್ಡ ಅಧಿಕಾರಿಗಳಿಗೆಮಾತ್ರ ಮೀಸಲಾಗಿದ್ದ ಕ್ಲಬ್ ಒಂದು ಸರ್ವ ನೌಕರರಿಗೂ ಸದಸ್ಯತ್ವವನ್ನು ತೆರೆದಾಗ ಘೋಷಿಸಿದ್ದು]

೧

ಓ ಬನ್ನಿಂ, ಓ ಬನ್ನಿಂ
ಗುಲಾಮನಾಟಕೆ ದೀಕ್ಷೆಯ ಕೊಳ್ಳಿಂ, ನೀವೂ!
ಸರ್ವರಿಗಾಗಿಯೇ ಸರ್ವಂ, ಎನ್ನಿಂ
ಓ ಬನ್ನಿಂ, ಓ ಬನ್ನಿಂ,
ಗುಲಾಮನಾಟಕೆ ದೀಕ್ಷೆಯ ಕೊಳ್ಳಿ.

೨

ಎಲೆಯೆಲ್ಲವು ಪೂಜ್ಯ
ಎಲ್ಲರಿಗು ಸಮ ಭೋಜ್ಯ
ಆರಾಗಲಿ ಎಂಟಾಗಲಿ
ಹಿಡಿಯುವುದಿ್ ವಾಜ್ಯ
ಸಾಮಾನ್ಯರೋ ನಾವು ...... ಓ ಬನ್ನಿಂ........

೩

ಮೇಲಿಲ್ಲವೊ ಕೀಳಿಲ್ಲವೊ
ಸರ್ವ ಸಮಾನದ ರಾಜ್ಯ
ಅಮಲ್ದಾರನೋ ಷೇಕ್‌ದಾರನೊ
ಎಡ್ಮಾಸ್ಟರೋ ಸಬ್ ಇನ್ಸ್ಪೆಕ್ಟರೊ
ಆರ್ಡರ್ಲಿಯೊ ಅಟ್ಟೆಂಡರೊ
ಕೇಟರ್ೕಕರೊ ಕಾರ್‌ಡ್ರೈವರೊ
ಕಾಂಪೌಂಡರೊ ಕಾನ್ಸ್ಟೇಬಲೊ

ಕಾಯಕವೆಲ್ಲವು ಪೂಜ್ಯ
    ಸರ್ವರಿಗು ಸಮ ಭೋಜ್ಯ.......ಓ ಬನ್ನಿಂ........

೪

ಓ ಬನ್ನಿಂ, ನೀವೂ! ನೀವೂ!! ನೀವೂ!!!
ಕೂಡೀ, ದಿಟ್ಟಗೆ ಕೂಡೀ
ಬಾಗಿದ ನೋಟವ ನೆಟ್ಟಗಿಡು
ಬಗ್ಗಿದ ಬೇ ನೇರ್ಮಾಡು
ಎಲೆ ನೋಡುವ ಕಣ್ಣಂಮೇಲೆತ್ತಿ
ಅಭ್ಯಾಸಂ ಇಲ್ಲದಾ ತಲೆಯೆತ್ತಿ
ಎದುರಾಳಿಗಳ ಮೊಗನೋಡು
ನಿನ್ನದೆ ಡಿಪ್, ನಿನ್ನದೆ ಬಿಡ್
ನಿನಗಾಗಿಯೆ ನಿನ್ನೊಂದಿಗೆ
ಈ ಮೀಸಲು ನೀ ತೊಡುವ ಪಣ.. ....ಓ ಬನ್ನಿಂ.......

೫

ದಾಸ್ಯದ ತಿಮಿರದಿ ದಾರಿಯೆ ತೋರದೆ
ದಾರಿದ್ರ್ಯದ ಶವ ಭಾರದಿ ಬಗ್ಗಿ
ದರ್ಪದ ದರಘಾತಕೆ ಕುಗ್ಗಿ
ಕುಸಿದಿಹ ಪಕ್ಷವನುಬ್ಬಿಸಿ ಹಿಗ್ಗಿ !
ತೊಲಗಿತು ನಿನ್ನೆಯ ನಾಯ್ ಪಾಡು
ಇನ್ನಿದು ನಿನ್ನದೆ ಟ್ರಂಪ್ ಕಾರ್ಡು.... .. ಓ ಬನ್ನಿಂ ... ...

೬

ಬರಿ ಲೌಕಿಕವ್ವೈ ನಮ್ಮದೆ ಯುಸಿರಿನ ಗಮನಂ
ಹುಸಿ ಇಲ್ಲದ ಖುಷಿ ತನಕಿದೊ ನಮ್ಮಯ ನಮನಂ
ಎಲೆ ತುಂಬಿಹ ಗುಲಾಮನಾಟಕೆ ಎಲ್ಲರ ನಮನಂ
ಮೇಣ್
ಮರೆ ಮೋಸದ ಬೂಟಾಟಕಿದೊ ಮರ್ದನ ದಮನಂ
ಧರ್ಮದ ಸೋಗಿನ ದುರ್ಲಾಭಾಟಕೆ, ಕೋ ಧಿಕ್ಕಾರದ ಶಮನಂ
ಮರ್ಮದ ಮೋಸದ ಮೂರೆಲೆ ಮಾಟಕೆ ಕೋ, ಉಚ್ಚಾಟನಂ
ಓ ಬನ್ನಿಂ
ಗುಲಾಮನಾಟಕೆ ದೀಕ್ಷೆಯ ಕೊಳ್ಳಿಂ.

—ಹೇಮ.

# ಸಂಪಾದಕ-ಘಾತುಕ

ಸ್ವಾಮಿ !

'ನವರಾತ್ರಿ' ಎಂಬ ನನ್ನ ಕವನವನ್ನು ಇದರೊಂದಿಗೆ ತಮ್ಮ ಪ್ರೀತ್ಯಾದರದ ಅವಗಾಹನೆಗಾಗಿಯೂ ತಮ್ಮ ವಾರಪತ್ರಿಕೆಯಲ್ಲಿ ವಿಜಯದಶಮಿ ದಿನ ಪ್ರಕಟಿಸುವ ಸಲುವಾಗಿಯೂ ಕಳುಹಿಸಿರುವೆನು. ದಯವಿಟ್ಟು ಕನ್ನಡಮ್ಮನ ಡಿಂಗರಿಗನಾದ ನನ್ನ ಜನ್ಮವನ್ನು ಸಾರ್ಥಕಪಡಿಸಬೇಕಾಗಿ ಕೇಳಿಕೊಳ್ಳುತ್ತೇನೆ. ನನ್ನ ಕಾವ್ಯನಾಮವನ್ನು ಈ ರೀತಿ ಅಚ್ಚುಮಾಡಿದರೆ ನಾನು ಸುಪ್ರೀತಃ 'ಡಿಂಗರಿಗ'.

ಆದಿನಾರಾಯಣ.

*   *   *   *

ಆದಿನಾರಾಯಣರವರಿಗೆ—ನಿಮ್ಮ ಮಹಾ ಕವನ ತಲುಪಿತು. ಆದರೆ, ಅದೊಂದು ನೀಳ್ಗವನವಾದ್ದರಿಂದ ನಮ್ಮ ವಾರ ಪತ್ರಿಕೆಯಲ್ಲಿ ಅದನ್ನು ಪ್ರಕಟಿಸಲು ಸಾಧ್ಯವಿಲ್ಲವೆಂದು ಹೇಳಬೇಕಾಗಿದೆ........

*   *   *

ನನ್ನ ಕವನದ ವಿಷಯವಾಗಿ ತಾವು ಮಾಡಿದ ಟೀಕೆ ನನ್ನನ್ನು ತುಂಬಾ ನೋಯಿಸಿದೆ. ಕವನವನ್ನು ಕವಿಯ ಪ್ರತಿಭೆಯೆಂಬ ಅಳತೆ ಗೋಲಿಂದ ತುಲನಮಾಡಬೇಕೇ ವಿನಹ ನಿಮ್ಮ ಪತ್ರಿಕೆಯ ಕಾಲಂ ಉದ್ದದಿಂದ ತಾವು ತೂಗಿದ್ದು ನನ್ನ ದುರಾದೃಷ್ಟ. ಆದರೂ, ಇಕೋ, ನಿಮ್ಮ ಮೂಲಕ ನನ್ನಿಂದ ಭಾಷಾಸೇವೆ ಸಲ್ಲಿಸಲಿ.

*   *   *   *

ನವನವ ನವೀನ ನವೋನ್ಮೇಷಣ
ಭಾವ ಶಿವ ಕುಲೀನ ಭಾವೋನ್ವೇಷಣ
ಎಲ್ಲಿಯು ನಿಲ್ಲದ ಭಾಷಣ ದೂಷಣ
ಕಲ್ಲೆದೆ ಕರಗುವ ಘೋಷಣ ಭೀಷಣ
ಧವಳೋತ್ತುಂಗದ ಧಾರಿಣಿ ಧಾಂಧಲೆ
ನೀರಾಕಾಶದ ನೀಚಾ ಕತ್ತಲೆ
ಧುಮು ಧುಮು ಧುಮು ಧುಮು
ಧಾಂಧಲೆ, ದಾರುಣ, ರಕ್ತದ ಘಮ ಘಮ

*   *   *   *

ನನ್ನ ಕವನವನ್ನು ನೀವು 'ನವರಾತ್ರಿ' ಕಾಲದ ಪತ್ರಿಕೆಯಲ್ಲಿ ಅಚ್ಚು ಮಾಡಿಲ್ಲವೆಂದು ನನಗೆ ನಿನ್ನೆ ತಿಳಿಯಿತು. ತರುಣ ಸಾಹಿತಿಗಳನ್ನು ನೀವು ಈ ಬಗೆಯಾಗಿ ಆಶಾ ನಿರಾಶೆ ಮಾಡುವಿರೆಂದು ನಾನು ತಿಳಿದಿರಲಿಲ್ಲ. ನನ್ನ ಕವನದೊಂದಿಗೂ ನೆನಪು ಕಾಗದಗಳೊಂದಿಗೆ ನಾನು ಆಗಲೇ ನಿಮಗೆ ಒಂದು ರೂಪಾಯಿನಷ್ಟು ಅಂಚೆ ಚೀಟಿಗಳನ್ನು ದಾನಮಾಡಿದೇನೆ. ಆದರೂ, ಎಂಟು ಪಂಕ್ತಿಯ ನನ್ನ ಕವನ ರತ್ನ ಇನ್ನೂ ಬೆಳಕಿಗೆ ಬಂದಿಲ್ಲವೆಂದರೆ.......

* * * *

ನನ್ನ ಕವನದ ಗತಿ ಏನಾಯ್ತು? ನನ್ನ ಕಾವ್ಯವಾಹಿನಿ ಬತ್ತಿ ಬರಡಾಗ ಬೇಕೆ? ಸೂಕ್ತ ತೋರಿದಂತೆ ನೀವು ಅದನ್ನು ಕೆತ್ತಿ ಹೊಳಪೇರಿಸಬಹುದು. ದಯವಿಟ್ಟು... ....

ಆದಿನಾರಾಯಣರಿಗೆ : ನಿಮ್ಮ ಕವನವನ್ನು ನಾವು ನಮ್ಮ ಶಿವರಾತ್ರಿ ಸಂಚಿಕೆಯಲ್ಲಿ ಪ್ರಕಟಿಸಬೇಕೆಂದಿದೇವೆ. ಆದರೆ, ತಮಗೆ ಯಾವ ಪ್ರತಿಫಲ ವನ್ನೂ ಕೊಡಲು ನಾವು ಅಶಕ್ಯರು.

"ಕರ್ಮಣ್ಯೇವಾಧಿಕಾರಸ್ತೆ" ಎಂಬುದು ನನಗೆ ಗೊತ್ತು. ನನ್ನ ಕರ್ಮ ನಾನು ಅನುಭವಿಸುತ್ತೇನೆ. ಕನ್ನಡದ ಉದ್ದಾಮ ಕವಿಗಳೆಲ್ಲ ಬಡತನದಲ್ಲಿ ನರಳುವಾಗ ನಾನು ಮಾತ್ರ ತಮ್ಮಿಂದ ಹಣ ಪಡೆದು ಮೆರೆಯುವುದೆಂದರೆ, ದುರಹಂಕಾರವಾದೀತು. ಬೇಡ. ತಾವು ಕೊಟ್ಟರೂ ಬೇಡ. ತಾವು ಪ್ರತಿ ಫಲ ಕೊಟ್ಟಿದ್ದರೂ, ನಾನು ಅದನ್ನು ತಮ್ಮಲ್ಲೇ ಇರಿಸಿ, ಅತ್ಯಂತ ಉತ್ತಮದ ಭಾವಗೀತೆಗೆ ಅದನ್ನು ಬಹುಮಾನ ಕೊಡುವಂತೆ ತಮ್ಮನ್ನು ಕೇಳಿಕೊಳ್ಳುತ್ತಿದ್ದೆ. ಬಿಡಿ, ಆ ಮಾತು.

ಶಿವರಾತ್ರಿ ಹೊತ್ತಿಗೆ ನನ್ನ ನವರಾತ್ರಿಯ ಮೊದಲ ಎರಡು ಪಂಕ್ತಿ ಅಸ ಮಂಜಸವಾಗಿ ಕಾಣಬಹುದು. ದಯವಿಟ್ಟು, ಅವಕ್ಕೆ ಬದಲು ಹೀಗೆ ಅಚ್ಚು ಹಾಕಿಸಿ :

ಶಿವ ಶಿವ ಸಿಂಚನ ಕಿಂಚನ ಭೂಷಣ
ಭಾವ ಭುವನೈಕತೆ ಭಾವೋನ್ಮೇಷಣ

ಕನ್ನಡಮ್ಮನ ಕಂದನನ್ನು ಕೈ ಹಿಡಿದೆತ್ತುವ ಸೇವಾ ದೀಕ್ಷೆಯನ್ನು ಹೊತ್ತಿರುವ ನಿಮಗೆ ನನ್ನ ವಂದನೆಗಳು, ಸಾಷ್ಟಾಂಗಗಳು. ಅಲ್ಪಸ್ವಲ್ಪ ತಪ್ಪು ತಿಳಿವಳಿಕೆ ಇದ್ದರೂ, ತಿದ್ದಿ, ಪ್ರಕಟಿಸಿ, ಉದ್ಧಾರಮಾಡಿ

ಶಿವರಾತ್ರಿ ಸಂಚಿಕೆಗೆ ೩ ರೂಪಾಯಿ ಬೆಲೆ ತುಂಬಾ ಹೆಚ್ಚಲ್ಲವೆ? ನನ್ನ ಸ್ನೇಹಿತರನೇಕರು ಅದನ್ನು ಕೊಂಡುಕೊಳ್ಳಲಶಕ್ತರಾದ್ದರಿಂದ, ನಾನೇ ಅವರಿಗೆ ಅದನ್ನು ಹಂಚಬೇಕಾಗಿದೆ.

ಇಂದೇ ನಾನು ನಿಮಗೆ ಮನಿಆರ್ಡರ್ ಮೂಲಕ ಕಳುಹಿಸಿರುವ ೩೬ ರೂ. ಗೆ ಈ ಕೆಳಕಂಡ ವಿಳಾಸದಾರರಿಗೆ ೧೨ ಪ್ರತಿಗಳನ್ನು ಟಪಾಲ್ ಮೂಲಕ ರವಾನಿಸಿ ಉಪಕಾರಮಾಡಬೇಕು .......

* * * *

**ಶಿವರಾತ್ರಿ ವಿಶೇಷ ಸಂಚಿಕೆ-ಪುಟ ೧೧೧**

ಶಿವ ಶಿವ !
ಎಲ್ಲಿಯು
ದಾರುಣ
ಕತ್ತಲೆ !
ಶಿವ !
ಶಿವ !!

— ಆದಿನಾರಾಯಣ.

---




ಹೋದ ಸರ್ತಿನೇ ವಾಶಿಕಣೋ ! ನಾಲ್ಕು ಪ್ರಶ್ನೆ ಹೇಳಿಕೊಟ್ಟಿದ್ದರು.
ಈ ಸಾರಿ ಎರಡೇ ಹೇಳಿಕೊಟ್ಟಿದ್ದದ್ದು !

#  ಸೋಮಣ್ಣನ ಲೆಕ್ಖ 

| | | | | | |
|---|---|---|---|---|---|
| ನಶ್ಯ ೩ ತೊಲ | ... | .... | ೦ | ೦ | ೯ |
| ಪಂಚೆ ೧ ಜೊತೆ | .... | .... | ೧ | ೧೨ | ೦ |
| ಬೆಣ್ಣೆ ಪಂಚೇರು | .... | .... | ೧ | ೨ | ೦ |
| ಅಕ್ಕಿ ೧ ಪಲ್ಲ | .... | .... | ೧೨ | ೮ | ೦ |
| ಸಕ್ಕರೆ ೧ ಮಣ | .... | .... | ೨ | ೬ | ೦ |
| ಕಟ್ಟಿಗೆ ಗಾಡಿ | ... | ... | ೧ | ೩ | ೬ |
| ಮನೆ ಬಾಡಿಗೆ | .... | .... | ೫ | ೮ | ೦ |
| ಹೋಟಲು ತಿಂಡಿ ವಗೈರೆ ಜುಲೈ ತಿಂಗಳ ಲೆಕ್ಖ | | | ೨ | ೪ | ೦ |
| | | | ೨೬ | ೧೨ | ೩ |
| ಸಿನಿಮಾ ವಗೈರೆ ದಾವಣಗೆರೆಗೆ ಹೋದದ್ದು ಇತ್ಯಾದಿ | | | ೨ | ೩ | ೯ |
| | | | ೨೯ | ೦ | ೦ |
| ಸೇವಿಂಗ್ಸ್ ಬ್ಯಾಂಕಿಗೆ | | | ೬ | ೦ | ೦ |
| | | ಒಟ್ಟು— | ೩೫ | ೦ | ೦ |

ಇಷ್ಟು ಸುಲಭದ ಸಂಸಾರ ಎಂದು ಮೂಗಿನ ಮೇಲೆ ಕೈಯಿಟ್ಟ ಸೋಮಣ್ಣ. ಕೆಲಸವಿಲ್ಲದ ದಿನ ಲೆಕ್ಖ ನೋಡುತ್ತಿದ್ದ........ಅವನ ಡೈರಿಯ ಪುಟದಲ್ಲಿ ಇದು ನಮೂದಿಸಿತ್ತು. ಆ ಡೈರಿ ೧೯೨೮ನೆ ಇಸವಿಯದು.

—ಹಗಲು ಗನಸಿ.

---

ಉಣ್ಣುಕ್ಕಿಲ್ಲ ತಿನ್ನುಕಿಲ್ಲ.
—ಹಾಕಿದ್ದು ಮಾತ್ರ ಬೆಳ್ಳೀತಟ್ಟೆ.

# ಲಲ್ಲಿ

ಕಚೇರಿಯಿಂದ ಬರುತ್ತಲೂ, ನೋಡುತ್ತಾನೆ. ಕಮಲು ಕಣ್ಣು ಬಾತು ಕೆಂಚಗಿದೆ! ಏಕೆ ಅಷ್ಟು ಅತ್ತಳು? ಅತ್ತೆ ನಾದಿನಿಯರ ಕಾಟವೋ, ತವರುಮನೆ ತಾಪತ್ರಯವೋ, ಕಾಸಿನ ಕೊರತೆಯೋ. ಕೂಸಿನ ಖಾಯಿಲೆಯೋ, ಯಾವುದು ಆಕೆಯ ಕಣ್ಣಲ್ಲಿ ಕಂಬನಿ ತುಂಬಿತು?....ಗೋವಿಂದುಗೆ ಬಗೆ ಹರಿಯಲಿಲ್ಲ.

ಕಾಫಿ ಬಸಿದುಕೊಳ್ಳುವ ರಭಸದ ನಡುವೆ, ಕಮಲು ಕೈ ಸನ್ನೆಮಾಡಿ, ಅವನ ಕಿವಿಯಲ್ಲಿ ಹಿಂದಲ ಬೀದಿ ಪುರಾಣಕ್ಕೆ ಹೋಗ್ತೇನೆ ಅಂತ ನೆಪ ಹೇಳಿ ಇಲ್ಲಿಂದ ಹೊರಬಿದ್ದು ಆಚೆ ಬೀದಿ ಅರಳಿ ಕಟ್ಟೆ ಹತ್ತಿರ ನಿಂತಿರುತ್ತೇನೆ, ನೀವು ಅಲ್ಲಿಗೆ ಬನ್ನಿ ಐದು ನಿಮಿಷ ತಡವಾಗಿ, ವಾಕಿಂಗ್ ಹೋಗೋಣ, ಪೂರ ಹೇಳೋದಿದೆ ಎಂದಳು. ಅವಳು ಆಚೆ ಹೊರಟಿದ್ದು, ಪುರಾಣ ಕೇಳೋಕಲ್ಲ ಹೇಳೋಕೆ.

ಗೋವಿಂದು ತಲೆಯಮೇಲೆ ಕೈ ಇರಿಸಿಕೊಂಡು ಕುಳಿತ. ಅವನ ಸಂಸಾರದಷ್ಟು ಹದಗೆಟ್ಟ ಸಂಸಾರ ಬೆಂಗಳೂರಲ್ಲಿ ಬೇರೊಂದಿದೆಯೋ, ಏನೋ ಸಂದೇಹ. ಕಡಮೆ ಸಂಬಳ, ಕದನ್ನ, ಕಾದಾಟ, ತಂದೆಗೆ ಗೂರಲು, ಮಗುವಿಗೆ ಲಿವರು. ಅಯೋಗ್ಯ ತಮ್ಮಂದಿರು ಗಂಡ ಸತ್ತ ಅಕ್ಕ ಮದುವೆಯಾಗದ ಇಬ್ಬರು ತಂಗಿಯರು ಮಡಿ ಹೆಂಗಸರು ಮೂವರು, ಹಳೇ ಆಚಾರದ ತಾಯಿ, ಇಂಟರ್ಮೀಡಿಯಟ್ ಹೆಂಡತಿ ಕೊಯಮುತ್ತೂರು ಕಡೆಯವಳು—ಸಾಲದೆ ಇದ್ದರೆ, ಭೋಗ್ಯದ ಮನೆ, ಚಾಡಿ ಕೇಳೋ ಸಾಹೇಬ, ಕಿರುಕುಳ ಕೊಡೋ ನೆರೆಮನೆ, ಕರುಜೇ ಇಲ್ಲದ ನಂಟರ ತಂಡ, ಸಿಗರೇಟಿನ ಚಟ!

ದಿನವೂ ಮನೆಯೊಂದು ಕುರುಕ್ಷೇತ್ರ. ಉಭಯ ಸೈನ್ಯಗಳ ನಡುವೆ, ರಥವನ್ನು ನಿಲ್ಲಿಸಿ, ಪಾಪ, ಗೋವಿಂದು ಪೇಚಾಡುತ್ತ ಪರದಾಡುತ್ತ ಗಡಗಡನೆ ನಡುಗುವನು....ಕಮಲು ಒಬ್ಬಳೇ ಅವನಿಗೆ ಊರುಗೋಲು.

ಕಮಲು ತಾನೆ ಏನುಮಾಡಿಯಾಳು? ಹಣ ಕೊಡಬಲ್ಲಳೆ? ವಾದಿಸಬಲ್ಲಳೆ? ಆ ತೋಳಂದಿರಿಗೆ ಕುರಿ ಸರಬರಾಜುಮಾಡಲು ಅವಳಿಂದ ಸಾಧ್ಯವೆ? ಗೋವಿಂದು ತನ್ನ ಗೋಳನ್ನು ವಿವರಿಸುವಾಗ, ಹೂಂಗುಟ್ಟಿ ಅವನ ಹಣೆ ಸವರಿ ಕ್ರಾಪು ಸರಿಮಾಡಿ, ಸಿಗರೇಟ್ ಹೊತ್ತಿಸಿ ಕಂಬನಿಯೊರಸಬಲ್ಲಳು, ಅಷ್ಟೆ ತಾನು ತಿಂಬ ಯಾತನೆಯನ್ನು ಗೋವಿಂದುವಿಗೆ ಹೇಳದೆ, ನುಂಗಬಲ್ಲಳು ಅಷ್ಟೆ.

ಆದರೆ, ಆ ಹೊತ್ತು, ಅವಳಿಂದ ಅದೂ ಸಾಧ್ಯವಿಲ್ಲದೆ ಹೋಯಿತು. ಅವಳ ಸಹನೆಯೂ ಎಲ್ಲೆ ಮೀರಿತು. ಅವಳ ತಾಳ್ಮೆಯೂ ತಳ ಕಂಡಿತು.

ಅರಳಿ ಕಟ್ಟೆಯಿಂದ ಅವರಿಬ್ಬರೂ ಲಾಲ್‌ಬಾಗ್ ಕಡೆಗೆ ಹೊರಟರು. ಜನರ ತಿರುಗಾಟ ಕಡಿಮೆಯಾಗಿದ್ದ ಒಂದು ಕಾಲುದಾರಿಯನ್ನು ಹಿಡಿದರು. ಉದ್ದಕ್ಕೂ, ಕಮಲು ತನ್ನ ಸಂಕಟವನ್ನು ತೋಡಿಕೊಳ್ಳುತ್ತ ಬಿಕ್ಕುತ್ತಿದ್ದಳು. ಖಾಯಿಲೆ ಮಗುವಿನ ಚಿಕಿತ್ಸೆ ವಿಷಯದ ಜಗಳ. ಗೋವಿಂದು ಅಕ್ಕ, ಅದು ಬದುಕುವುದಿಲ್ಲವೆಂದೂ, ಅದಕ್ಕಾಗಿ ಖರ್ಚುಮಾಡುವ ಹಣವೆಲ್ಲ ವ್ಯರ್ಥವೆಂದು ಹೇಳಿದ್ದು, ತಾನು ಅದಕ್ಕೆ ರೇಗಿ ಮೂಲೆಯಲ್ಲಿ ಕುಳಿತದ್ದು, ಅತ್ತೆ ರೇಗಿದ್ದು, ಇತ್ಯಾದಿ. ಗೋವಿಂದು ಅವಳಿಗೆ ಏನು ತಾನೆ ಸಮಾಧಾನ ಹೇಳಬಲ್ಲ? ಅವಳ ತೋಳಿನ ಮೇಲೆ ಕೈ ಇರಿಸಿ, ಬೆನ್ನು ತಟ್ಟುತ್ತ, ಕಮಲು! ಕಮಲು! ದೇವರಿದಾನೆ, ನಮ್ಮ ಮಗುವನ್ನು ಉಳಿಸಿ ಕೊಡುತ್ತಾನೆ, ಎಂದು ಆಗಾಗ ಗದ್ಗದಿಸುತ್ತ ಇದ್ದ........

ಅವರಿಬ್ಬರೂ ನಡೆದು ಹೋಗುತ್ತಿದ್ದ ದಾರಿಯ ಪಕ್ಕದಲ್ಲಿ ಒಂದು ಕಲ್ಲುಬೆಂಚಿತ್ತು. ಅದರ ಮೇಲೆ, ಮುಸುಕು ಹಾಕಿಕೊಂಡು, ಇಬ್ಬರು ಮುದುಕರು ಕುಳಿತಿದ್ದರು. ಅವರಲ್ಲೊಬ್ಬರ ದೃಷ್ಟಿ ಆ ದಂಪತಿಗಳಮೇಲೆ ಬಿತ್ತು. ತಮ್ಮ ಪಕ್ಕದವರನ್ನು ಕೂಗಿ ಅವರು, "ಸ್ವಾಮಿ! ಕಾಲ ಎಷ್ಟು ಕೆಟ್ಟುಹೋಯಿತು, ನೋಡಿದಿರಾ! ನಾಚಿಕೆ ಗೀಚಿಕೆ ಎಲ್ಲ ಹೋಯಿತು. ಹೆಣ್ಣು-ಗಂಡು ಎನ್ನೋದು ಇಷ್ಟು ಅಗ್ಗ ಆಗಿಹೋಯಿತೆ? ನೋಡಿ, ಇವರ ಲಲ್ಲೇನ" ಎಂದರು. ಅದಕ್ಕವರು, "ಯಾವ ಗಂಡೋ ಯಾವ ಹೆಣ್ಣೋ?" ಎಂದು ಖಾರ ಬೆರೆಸಿದರು.

—ನಾ. ಕ.

---

## ಕ್ಲಬ್ಬಿಗರು
## ಅಂದು—ಇಂದು

ತಂದೆ ಇಸ್ಪೇಟ್ ಕ್ಲಬ್ಬು—ತಾಯಿ ಲೇಡೀಸ್ ಕ್ಲಬ್ಬು
ಮನೆಯೊಳಗೆ ಆಳುಗಳ ಸಾಮ್ರಾಜ್ಯ ಮೆರೆದಿರಲು
ಕುವರನಿಗೊ ಶಿಶುವಿಹಾರವೆ ಸಾರ ಸರ್ವಸ್ವವಾಯ್ತು.

ಅಮ್ಮಗಾಸ್ಥ್ಮದ ಕೆಮ್ಮು—ಅಪ್ಪನಿಗೆ ಡಯಬಿಟಿಸ್
ಮನೆ ತುಂಬ ನರ್ಸುಗಳ ಓಡಾಟವೆಂಬಾಗ
ಬೆಳೆದ ಮಗರಾಯಗೋ ರೇಸ್ ಕ್ಲಬ್ಬೆ ಸರ್ವಸ್ವವಾಯ್ತು.

—ಎ. ಎಸ್. ರಾಮಕೃಷ್ಣ.



# ಆಗ—ಈಗ



ಆಗ:—ಕರೆದು ಕೈಮುಗಿದು – ಅಳಿಯ ದೇವರೆ ಎಂದು ಪನ್ನೀರ ಎರಚಿ "ನಮ್ಮ ಕುವರಿಯ ನಿಮ್ಮ ಅರಸಿಯಾಗಿ ಆರಿಸಿ" ಎಂದು ತಾಟು ತುಂಬಿದ ಹಲ್ವ —ಲೋಟ ತುಂಬಿದ ಹಾಲು ತಿನ್ನಿ ತಿನ್ನಿ ಎಂದು ಉಪಚರಿಸಿ ಕಟ್ಟಿದರು ಕಳಪೆ ಹೆಣ್ಣನು ಎನ್ನ ಕತ್ತಸುತ್ತ.

ಇದುವೆ ಸಗ್ಗದ ಕದವೆಂದು ಬಾಯ್ಬಿಟ್ಟು ನುಗ್ಗಿದೆ ನಾನು ಸರ್ಜ್ ಸೂಟು ತಾಟಿನ ಹೊಳಪ ಕಂಡು........ಆದರೇ ! ! !

ಈಗ:— ಕೂಳು ದಂಡ—ದಂಡ ಪಿಂಡ ಉಂಡಾಡಿಭಟ್ಟ ಹೆಂಡಿರನು ಕರೆದೊಯ್ದು ಬೇರೆ ಬಾಳದ ಭಂಡ—"ಮಾವನ ಮನೆ ಸೇರಿದವ ಏಳಲೇಬಾರದೆ? ಮಕ್ಕಳೊಂದಿಗ ನಾನು ಎಂಟು ವರ ಹುಡುಕಬೇಕಿನ್ನು—ಏಳಲೈ ಬಂಟ ನಿನ್ನ ನಂಟತನ ಸಾಕಾಯ್ತು ತೊಲಗು ತೊಲಗಲೆ ಋಣವೆ!" ಎಂದೆಂದು ಬೈಯ್ಯ ಬಹುದೇ ಎನ್ನ ಅರಸಿ ಯಪ್ಪ?

*   *   *

ಆಗ:—ಮಲ್ಲಿಗೆಯ ಮುಡಿದು—ನಸುನಾಚಿ ಬಳಿ ಸಾರಿ ಚೆಲ್ವ ಬೀರುವ ನಾರಿ "ಎನ್ನರಸ ಚೆನ್ನರಸ ಮಾವನ ಮಗನೆ— ಮಲ್ಲಿಗೆಯ ಅರಳೆ" ಎಂದು ಚೆಲ್ಲು ಚೆಲ್ಲು ಬಡಿದು ಆಡಿದ ಮಡದಿಯ ಕಂಡು....

ಹಿರಿ ಹಿರಿ ಹಿರಿ ಹಿಗ್ಗಿ ಇದುವೆ ಜೀವನ್ಮುಕ್ತಿ—ಬದುಕಿ ಬಾಳಬೇಕೆಂದೆಡೆ ಬಾಳ ಸಂಗಾತಿ ಇದ್ದೊಡೆಂ ಚೆಲ್ವು ಎಂದೆಂದು ಹಾಡಿ ಹಿಗ್ಗಿದೆ ನಾನು.

........ಆದರೇ ! ! !

ಈಗ:—ಅಪ್ಪ ಕೊಟ್ಟ ರವಕೆಯೋ—ನಿಮ್ಮ ಮಾವ ಕೊಡಿಸಿದ ಸೀರೆಯೋ ಈವರೆಗೂ ಉಟ್ಟಾಯ್ತು....ನಿಮ್ಮ ಮೂತಿಗೆ ಒಂದು ಚಿಂದಿಯನೂ ಕಾಣೆ! ಹಿರಿಯ ಮಗ ಹರಿರಾಯ ಶಾಲೆ ಹೊಕ್ಕೊಡೆ ಅವನ "ಪಾಪ ಪರದೇಶಿ ಕೂಸೆ!" ಎಂದು ಜನ ಪೀಡಿಸುವಂತಾಯ್ತು ಎಮ್ಮ ಗತಿ... ಸಾಕು ಈ ಸಂಸಾರ ಏನು ಪಾಪವ ಮಾಡಿ ನಿಮ್ಮ ಕೈಹಿಡಿದೆನೋ" ಎಂದು ಅನ್ನಬಹುದೇ ಎನ್ನ ಮಲ್ಲಿಗೆಯ ದಂಡೆ!

*   *   *

ಆಗ:—ಹಿಂದೊಮ್ಮೆ ಹ್ಯಾಟು ಬೂಟೂ ಸೂಟು ಟೈಗಳನೆ ಹಾಕಿ. ಸೀಟಿ ಹೊಡೆಯುತ ನಡೆಯೆ ಕೃಷ್ಣೇಂದ್ರ ಭವನಕ್ಕೆ— ಪೂರಿ ಹಲ್ವ ಸಾಗು-ಥಂರೋಟು

—ಜಹಂಗೀರು, ಮೇಲೆ ಮೂರು ಮಸಾಲೆಯನ್ನು ತಿಂದು ಊಟ ಸೇರದು ಎಂದು ಅಂದದ್ದು ಉಂಟು.

........ಆದರೆ ! ! !

**ಈಗ:**—ಚೀಲವಂತರು ನಾವು—ಕ್ಯೂನಿಂತು ತಲೆಕೆರೆದು, ತೇಪೆಹಾಕಿದ ಟೋಪಿ, ಹರಿದ ಚಪ್ಪಲಿಯೊಡಗೂಡಿ ಆರು ಸೇರೆಂದು ಮೂರು ರೂಪಾಯಿ ತೆತ್ತು—"ಹಸನು ಮಾಡೇ ಮಡದಿ" ಎಂದೆಂದು ರೇಷನ್ನು ಮುಂದೆಸೆಯೆ— "ನುಚ್ಚುಕಲ್ಲು ಮಣ್ಣು—ಅಳತೆಯಲಿ ಅರಪಾವು ಒಟ್ಟು ದಕ್ಕಿದ್ದೆಮಗೆ ನಾಲ್ಕು ಸೇರೇ—ಮೂರೆಕರೆ ಗದ್ದೆಯನು ಕೊಳ್ಳಿ— ವರ್ಷದ ಕೂಳು ಕಳೆದೀತು ಎನೆ— ಈಮೂತಿಗೇಕೆ ಮೇಲುಕೋಟೆ ನಾಮ" ಎಂದೆಂದು ಕಾಡಬಹುದೇ ಎನ್ನ ಕೈಹಿಡಿದ ಮಡದಿ !

*  *  *

**ಆಗ:**—"ಹಸಿವಿಲ್ಲ—ನಾನೊಲ್ಲೆ ಈ ಪಲ್ಯ—ಹಳಸಿದನ್ನವು ಬೇಡ— ಇನ್ನಷ್ಟು ತುಪ್ಪವಿಲ್ಲದೆಡೆ ಕೈತೊಳೆದುಬಿಡುವೆ, ಈ ಹುಳಿಗೆ ಉಪ್ಪಿಲ್ಲ—ಈ ಅನ್ನ ಬೆಂದಿಲ್ಲ—ಈ ಗೊಜ್ಜು ನಾನೊಲ್ಲೆ—ಹಂದಿ ತಿನ್ನುವ ರೊಟ್ಟಿ—ನಾಯಿ ಮುಟ್ಟಿದ ವಡೆ—ಬೇವರ್ಸಿಯೇ ನಾನು ಇದನ ಮುಟ್ಟಲಿಕ್ಕೆ—ಉಹೂಂ! ಇನ್ನಷ್ಟು ಹಾಕೆನಗೆ ಬೆಣ್ಣೆ ಮುದ್ದೆ" ಎಂದೆಂದು ಮುಂತಾಗಿ—ಅಜ್ಜಿ ಅಮ್ಮನ ಕಾಡಿ— ಗೋಳಿಡಿಸಿ ಪೀಡಿಸುತಿದ್ದೆ ಅಂದಿನಾ ದಿನದಲ್ಲಿ.

........ಆದರೆ ! ! !

**ಈಗ:**—ದುಡಿದು ದವಡೆಗಿಕ್ಕಿದಾ ವದೆ ತಿಂದು ಆಫೀಸರಿಂದ ಕ್ಯಾಕರಿಸಿ ಥೂಕರಿಸಿಕೊಂಡು, ಕಣ್ಣೀರ ಸುರಿಸಿ, ಹಾಯಾಗಿ ಉಂಡು ಮಲಗುವುದೆಂದು ಮನೆಯ ಸೇರೆ –ಹಳಸಿದನ್ನದ ಉಂಡೆ—ಆರಿದಾ ಸಾರು—ಹುಳಿಮಜ್ಜಿಗೆ— ಹಳೆಯ ಉಪ್ಪಿನಕಾಯಿ "ತಿಂದರೆ ತಿನ್ನು—ಬೇಡವಾದೊಡೆ ಸಾಯಿ" ಎಂದೆನ್ನುವಂತೆ ಮಡದಿ ಮುದುಡಿ ಮಲಗಿರೆ ಹಸಿದು ಬಂದಿಹ ನಾನು ಬಡಿಸಿಕೊಂಡೇ ಉಂಡು ಮಲಗುವ ಪಾಡಿಗೀಡು ಮಾಡಬಹುದೇ ಎನ್ನ ತಾಳಿ ಕಟ್ಟಿದ ತರುಣಿ?

*  *  *

**ಆಗ:**—ಅವಳ ಹಣೆ ಚೆನ್ನಿಲ್ಲ—ಗರುಡು ಮೂಗೀಕೆಯದು. ನಾರಿಯಲ್ಲ ಆಕೆ ಮಾರಿ ಹೌದು. ಟೊಂಕ ಸಿಂಹನದಲ್ಲ ಮೂಗು ಸಂಪಿಗೆಯಲ್ಲ—ಹರಿಣಾಕ್ಷಿ —ಮೀನಾಕ್ಷಿ—ಕಮಲಾಕ್ಷಿ—ಯಾವ ಅಕ್ಷಿಯು ಅಲ್ಲ ಕಾಕಾಕ್ಷಿ ಈಕೆ. ಕಿತ್ತಲೆ ಬಣ್ಣ ಇದ್ದಲಿಯ ಮೂಟೆ—ಹಾರ್ಮೋನಿಯ ಬಲ್ಲೊಡೆ ಹಾರಹಾಕಲುಬಹುದೆ? ಎಂದೆಂದು ಬಂದ ಹೆಣ್ಣುಗಳೆಲ್ಲ ಬೇಡೆಂದು ಅಂದಿದ್ದುಂಟು ಅಂದಿನಾ ದಿನದಲ್ಲಿ.

....... ಆದರೆ ! ! !

ಈಗ:—ಕೈಹಿಡಿದ ಕಾಮಾಕ್ಷಿ—ಅಷ್ಟವೋರೆಯ ಗಂಟು ಮೂಗಿನ—ಗಿಡ್ಡ ಕೊರಳಿನ ದೊಡ್ಡ ದೇಹದ—ತಾಟಕಿಯು ತಾ ತಾಳಿಬಿಗಿ ಎಂದು ತಲೆಯ ಬಗ್ಗಿಸಿರೆ ತಾವರೆಕೆರೆಯ ತಹಸೀಲುದಾರರ ಮಗಳೆಂದು ತಾಳಿ ಬಿಗಿದದ್ದಾಯ್ತು. ಹೊಳೆಯದಾಟದ ಮೇಲೆ "ಕೈಹಿಡಿದ ಕಮಂಗಿಯಲ್ಲದೆ ಮತ್ತೇನು?" ಎಂದು ಕೇಕೆಹಾಕಲುಬಹುದೆ ಈ ನನ್ನ ಮುದ್ದಿನ ಮಡದಿ?

* * *

ಆಗ:—ಎಲ್ಲೆಲ್ಲೂ ಹಸುರಿತ್ತು—ಹೂವಿತ್ತು ಸುಪ್ಪತ್ತಿಗೆಯ ಪಲ್ಲಂಗವಿತ್ತು.

ಈಗ:—"ತಿಪ್ಪನಿರು" ಎಂದೆಂಬ ಮಡದಿ ಇಹಳು. "ಹರಿವ ಗರಗಸದಲ್ಲಿ ಶಿರವ ನೊಡ್ಡಲುಬಹುದು ಈ ಬೇವರ್ಸಿಯ ಕೈಯ್ಯ ಹಿಡಿವುದು ಬೇಡ...." ಎಂದವಳು ಅಂದಿದ್ದು ದಿಟ. ಆದರೂ ಅವಳೆನ್ನ ಮನದೆನ್ನೆ—ನಾನವಳ ಚೆನ್ನರಸ—ಸಾಗುತಿದೆ ಎಮ್ಮ ದೋಣಿ—ಸಾವಿರ ತೂತಿನೊಡಗೂಡಿ ಮುಟ್ಟುವುದೊ ದಡವೆಂದು ಬಲ್ಲವರಾರು?

— ದಾಶರಥಿ ಧೀಕ್ಷಿತ್.



"ಏನೋ ಕತ್ತೆ, ಬಾಚಣಗೆ ಜೇಬಿನಲ್ಲಿಟ್ಟುಕೊಂಡಿದ್ದೀಯ ಒಂದು ಕತ್ತರೀನು ಇಟ್ಟುಕೋ ಸರಿಹೋಗುತ್ತೆ. ಉದ್ಯೋಗಮಾಡುವಿಯಂತೆ!" (ಮಕ್ಕಳಿಗಾಗಿ)

# ಚಿರಪರಿಚಿತರು



"ಓಹೊ!....ನಮಸ್ಕಾರ...."

"ಎಲ್ಲಿ ನೋಡಿದ್ದೆ ತಮ್ಮನ್ನಾ!"

"ಪ್ರತಿನಿತ್ಯಾ ನಿಮ್ಮನ್ನ ನೋಡಿದ ಹಾಗೇ ನೆನಪು ಅಲ್ಲವೆ?"

"ಹೌದು ನನಗೂ ಹಾಗೇ ಕಾಣುತ್ತೆ"

"ಹೌದೆ?.... ..."

"ಹೌದಲ್ಲದೆ ಮತ್ತೇನು....ಎಲ್ಲಿ ನೋಡ್ತೇನೆ ನಿಮ್ಮನ್ನ ನಿತ್ಯಾ!"

"ಅದೇ ನಾನೂ ಕೇಳೋದು ."

"ಹ್ಹ ಹ್ಹ....ನಾನೊಬ್ಬ ಮಂಕ...."

"ನಾನೂ ಹಾಗೇಂತ ತೋರತ್ತೆ"

"ನಿಮ್ಮ ತಲೆ ನನ್ನ ತಲೆ ಇದ್ದಾಗೆ ಇದೆ ನೋಡಿ—ಅದೇ ಬೋಳು—ಅದೇ ಒಂಟೆ ಬಿಳಿ ಕೂದಲು—ನಿತ್ಯ ನನ್ನ ತಲೆ ನಾನು ಕನ್ನಡೀಲಿ ಕಾಣೋ ಅಭ್ಯಾಸ....ಈಗ ತಮ್ಮ ತಲೆ ಕಂಡು—ನನ್ನ ತಲೆ ನೆನಪಿಗೆ ಬಂದು ಎಲ್ಲೋ ನೋಡಿದ್ದೂಂತ ತಬ್ಬಿಬ್ಬಾಡಿದೆ ಕ್ಷಮಿಸಿ....ಹ್ಹಹ್ಹಹ್ಹಹ್ಹ...."

"ಹ್ಹೊ ಹ್ಹೊ ಹ್ಹೊ....ನಾನೂ ಹಾಗೇ ಅಂದ್ಕೊಂಡೆ—ನಿಮ್ಮ ಮೂಗು ನೆಶ್ಯ ಮಯುದ ಪೊಟರೆ ನನ್ನ ನಾಶಿಕ ಅದೇ ಜಾತಿ—ಅದೇ ನಾನೂ ಕನ್ನಡೀಲಿ ನನ್ನ ಮೂಗು ಕಾಣೋ ಪದ್ಧತಿ—ಈಗ ತಮ್ಮ ಮೂಗು ಕಂಡು ಎಲ್ಲೋ ನೋಡಿದ್ದೂಂತ ನಮಸ್ಕಾರಂದೆ....ಕ್ಷಮಿಸಿ .. ಹ್ಹ ಹ್ಹಿ ಹ್ಹಿ...."

"ಬರ್ತೇನೆ ಗೊತ್ತಿರಲಿ...."

"ಬರ್ತೇನೆ ನೆನಪಿರಲಿ ಹ್ಹ ಹ್ಹ...."

— ದಾಶರಥಿ ದೀಕ್ಷಿತ್.



# ಹರಿಶ್ಚಂದ್ರ



ನಮ್ಮೂರಲ್ಲಿ ಪಂಚಾಯಿತಿ ಇಲೆಕ್ಶನಿಂದ ಒಡಕು ಬಿರುಕು ಮಾರಾಮಾರಿ ಮನಸ್ತಾಪ ವೈಷಮ್ಯ ಕೋಮುವಾರು ಚಂಡಮಾರುತ ದುರಾಶೆ ನಿರಾಶೆ— ಇತ್ಯಾದಿಗಳ ದಾಂಧಲೆ ವಿಪರೀತವಾಗಿ, ಹಳ್ಳಿ ಜೀವನವೇ ವಿಷಮಯವಾಗಿತ್ತು.

ಆದ್ದರಿಂದ, ಪ್ರೈಮರಿ ಸ್ಕೂಲ್ ಹೆಡ್ಮೇಷ್ಟರು. "ಒಂದು ನಾಟಕ ಆಡಿ. ಜನರ ಮನಸ್ಸನ್ನು ತಿದ್ದಿ, ಸತ್ಯ ಅಹಿಂಸೆಗಳನ್ನು ಮತ್ತೆ ನೆಲೆಗೊಳಿಸಿ ಊರಿನವರಿಗೆ ಹೊಸ ಹುರುಪು ಕೊಡೋಣ" ಎಂದರು. ನಾನೂ ನನ್ನ ಗೆಳೆಯರೂ, ಹೂಂ, ಎಂದೆವು. ಕಲಾಭಿಮಾನಿಗಳನ್ನೆಲ್ಲ ಕಲೆ ಹಾಕಿದೆವು.

ಹರಿಶ್ಚಂದ್ರ ಆಡೋಣವೆಂದು ಮೇಷ್ಟರು ಹೇಳಿದರು, ಏಕೆಂದರೆ, ಅವರಿಗೆ ಹರಿಶ್ಚಂದ್ರನ ಪಾರ್ಟು ಕಂಠಪಾಠ. ಆದರೆ, ಅವರ ಕಂಠ ತೀರ ಹೊಲಸು. ಅಲ್ಲದೆ ಅದನ್ನಾಡಿದರೆ, ಸುಳ್ಳು ಮೋಸ ಇತ್ಯಾದಿಗಳ ಪ್ರಭಾವದಿಂದ ಗೆದ್ದ ಚೇರ್ಮನಿಗೆ ಅಪಮಾನವಾಗುತ್ತದೋ ಎಂಬ ಭಯ ಬೇರೆ. ಆದರೂ, ಹರಿಶ್ಚಂದ್ರನನ್ನೇ ಆರಿಸಿದೆವು.

ಪಾರ್ಟ್ದಾರರ ಹಂಚಿಕೆಯಲ್ಲೇ ಪ್ರಚಂಡ ಸಮರ ಎದ್ದಿತು. ಮೇಷ್ಟರ ಕೈ ಬೆತ್ತದ ರುಚಿ ಅರಿತಿದ್ದ ಅನೇಕ ಯುವಕರು ತಾವೇ ನಕ್ಷತ್ರಿಕನ ಪಾರ್ಟಿಗೆ ಅರ್ಹರು ಎಂದು ವಾದಿಸಿದರು. ವಸಿಷ್ಠನ ಪಾರ್ಟಿಗೆ; ಸೋತ ಪಾರ್ಟಿ ಮುಖಂಡನೂ, ವಿಶ್ವಾಮಿತ್ರನ ವೇಷಕ್ಕೆ ಗೆದ್ದ ಪಾರ್ಟಿ ಪ್ಲೂಟ್‌ಲಾಯರೂ ನಾನು ತಾನೆಂದು ಮುಂದೆ ಬಂದರು. ಪ್ಲೂಟ್‌ಲಾಯರು ಹಸುವೊಂದನ್ನು ವಸಿಷ್ಠನ ಉಮೇದುವಾರನಾಗಿದ್ದ ತಮ್ಮಯ್ಯನವರ ಕೊಟ್ಟಿಗೆಯೊಂದರಿಂದ ಕದ್ದಿದ್ದ. ಆದ್ದರಿಂದ, ಕತೆಯಲ್ಲೂ ಅದೇ ಬಹಿರಂಗವಾಗುತ್ತದೆ, ಎಂದು ಗೊತ್ತಾದಾಗ, ಲಾಯರಿ ಪರಾರಿ ಅನ್ನಿ. ಚಂದ್ರಮತಿ ಮಾಡುತ್ತೇನೆ ಎಂದು ಧೈರ್ಯವಾಗಿ ಬಂದು ನಿಂತ ಹೆಣ್ಣಿಗರನ್ನೆಲ್ಲ ಮೇಷ್ಟರು ಒಲ್ಲೆ ಎಂದು ನಿರಾಕರಿಸಿ ಬೈದು ಕಳುಹಿಸಿದರು ಬೇರೇ ಊರಿಂದ ಕರೆಸೋಣ ಅಂದ್ರೆ ಚೇರ್ಮನ್ ನೊಪ್ಪಲಿಲ್ಲ. ಹೆಣ್ಣು ಮಕ್ಕಳ ಶಾಲೆ ಮೇಡಂ ಒಬ್ಬರಾದರೆ. ಸರಿ, ಎಂದು ಮೇಷ್ಟರು ಸೂಚನೆ ಕೊಡುತ್ತಲೂ, ಊರವರೆಲ್ಲ ಆಕೆ ಮೇಲೆ ಇಲಾಖಾಧಿಕಾರಿಗಳಿಗೆ ಮೂಗರ್ಜಿ ಬರೆದರು. ಕೊನೆಗೆ. ನಾನೇ ಸೀರೆ ಉಟ್ಟುಕೊಂಡು ಗಂಟಲು ಒಡೆದುಕೊಳ್ಳಬೇಕಾಯಿತು. ನನಗೆ ಅದೇ ಮೊತ್ತ ಮೊದಲನೆಯ ಹೆಣ್ಣು

ಪಾರ್ಟಿ. ನೆನೆದು ಕೊಂಡರೆ, ನನಗೇ ನಗು ಬರುತ್ತಿತ್ತು; ಆದರೂ, ಉದ್ದಕ್ಕೂ ಆಳಬೇಕಾದ ನಾಟಕ ಅದು.

ನಾವು ಪ್ರಾಕ್ಟೀಸ್ ಮಾಡಿದ್ದು ಮೇಷ್ಟರ ಮನೆಯಲ್ಲಿ. ಅವರ ಪಕ್ಕದ ಮನೆಯವರು ಚೇರ್ಮನ್‌ರ ಪಾರ್ಟಿ. ಅವರು ತುಂಬಾ ಕಿರುಕುಳ ಕೊಟ್ಟರು, ಕಲ್ಲು ಕೂಡ ನಾಲ್ಕೈದು ರಾತ್ರಿ ಬಿತ್ತು. ಇದನ್ನು ಕೇಳಿ, ನಮ್ಮನ್ನ ಅವರ ಎದುರು ಪಕ್ಷದವರು ತಮ್ಮ ಬೀದಿಗೆ ಕರೆದು ಅಲ್ಲಿ ಕೂಗಿಕೊಳ್ಳಲು ಅವ ಕಾಶಕೊಟ್ಟರು. ನಾಲ್ಕೈದು ರಾತ್ರಿ ಸೊಗಸಾದ ಟೀನೂ ಮಾಡಿ ಕೊಟ್ಟರು, ಕುಡಿಯುವುದಕ್ಕೆ. ಇದನ್ನು ಕೇಳಿ ಚೇರ್ಮನ್ನರು ಕೆಂಡವಾದರು. ಸ್ಕೂಲಲ್ಲೇ ಸೇರಿ, ಅಂತ ಹುಕುಂ ಹೊರಡಿಸಿ, ಪಂಚಾಯಿತಿ ಹಣದಿಂದಲೇ ನಮಗೆಲ್ಲ ರಾತ್ರಿ ಊಟ ಏರ್ಪಾಟುಮಾಡಿದರು, ನಾಟಕ ಸಿದ್ಧವಾಗುವವರೆಗೆ ಅಲ್ಲಿಂ ದಾಚೆಗೆ ನಮ್ಮ ಕೆಲಸ ನಿಧಾನ ಬಿತ್ತು.

ನಾಟಕದ ದಿವಸ ರುಪವ್ಯೋ ರಂಪ. ಎರಡು ಪಕ್ಷದವರೂ ರಾಶಿ ರಾಶಿ ಕಲ್ಲು ಸೇರಿಸಿದ್ದರು ನಾವು ಗೊತ್ತುಮಾಡಿದ್ದ ನಕ್ಷತ್ರಕನಲ್ಲದೆ, ಅವರಿವರ ದಾಕ್ಷಿಣ್ಯಕ್ಕಾಗಿ ಇನ್ನೂ ಮೂರು ಜನ ಪುಂಡರನ್ನು ನಾವು ಸೇರಿಸಿಕೊಳ್ಳಲೇ ಬೇಕಾಯಿತು. ಚಂದ್ರಮತೀ, ಚಂದ್ರಮತಿ, ಅಂತ ಒಟ್ಟಾಗಿ ಜನ ಕೂಗ ಲಾರಂಭಿಸಿದರು. ಅವರು ಕೂಗಿದಾಗಲೆಲ್ಲ ನಾನು ಅಟ್ಟದ ಮೇಲಕ್ಕೆ ಹೋಗಿ, ಲೋಹಿತಾಶ್ವನನ್ನ ಮಲಗಿಸಿಕೊಳ್ಳಬೇಕಾಗಿ ಬಂತು. ಮೇಷ್ಟರಿಗಂತೂ, ಚೇರ್ಮನರ ಎದುರು ಪಕ್ಷದವರು, ಬಹಳ ಹಿಂಸೆ ಕೊಟ್ಟರು. ಆದರಿಂದ, ನನಗೂ ಪ್ರಾಣಕ್ಕೆ ಬಂತು. ಅನ್ನಿ.

ಹೆಂಡತಿಯ ಕತ್ತು ಕೊಯ್ಯಬೇಕೆಂದು ಅಪ್ಪಣೆ ಆಯಿತಲ್ಲಾ, ಹರಿಶ್ಚಂದ್ರ ನಿಗೆ! ಸರಿ! ಮೇಷ್ಟರು ಕತ್ತಿ ಎತ್ತಿ ನಿಂತಿದಾರೆ, ನಾನು ಕತ್ತು ಬಗ್ಗಿಸಿ ಕುಳಿತಿ ದ್ದೇನೆ. ನನ್ನ ಹಾಡೂಮುಗಿಯಿತು; ಅವರ ಹಾಡೂ ಮುಗಿಯಿತು. ಆದರೆ, ಶಿವ ಪ್ರತ್ಯಕ್ಷವಾಗಲಿಲ್ಲ. ಅವನನ್ನ ಎಲ್ಲಿಗೋ ಎಳೆದುಕೊಂಡು ಹೋಗಿ ಬಿಟ್ಟಿ ದ್ದರು, ಪಾಪಿಗಳು

ಹೊಡಿಯೋ, ಕೊಲ್ಲೋ, ಕಡಿಯೋ—ಅಂತ ಎಲ್ಲರೂ ಕೂಗುತ್ತಿದಾರೆ. ನಾನು ತಲೆ ತಗ್ಗಿಸಿಕೊಂಡೇ, ರೀ! ಹಾಗೆಯೇ ನಿಂತಿರಿ!, ಅಂತ ಮೇಷ್ಟರಿಗೆ ಹೇಳುತ್ತಾ ಇದೇನೆ.

ಆಗ, ಚೇರ್ಮನ್ ಆಗದೆ ಸೋತು ಕೂತಿದ್ದರಲ್ಲಾ. ವೀರಭದ್ರಪ್ಪನವರು. ಅವರು ಒಂದು ಚಮತ್ಕಾರಮಾಡಿದರು. ಶಿವನನ್ನ ಚೇರ್ಮನ್ನರೇ ಸಾಗಿಸಿ ದಾರೆ, ಅಂತ ಅವರಿಗೆ ಪತ್ತೆಯಾಗಿತ್ತು. ಆದ್ದರಿಂದ ಅವರು ಅಟ್ಟದಮೇಲಕ್ಕೆ ಛಂಗನೆ ಹಾರಿ, "ಹರಿಶ್ಚಂದ್ರಾ! ಪರಮೇಶ್ವರನು ಗಂಗಾಗೌರಿಯರೊಂದಿಗೆ ಇಲ್ಲಿಗೆ ಬರಲು ಸಿದ್ಧಮಾಡಿಕೊಳ್ಳುತ್ತಿರುವನು. ಅವರು ಎಷ್ಟಾದರೂ ಹೆಣ್ಣು

ಮಕ್ಕಳು. ಥಟಕ್ಕನೆ ಬರ್‍ತ್ತಾರೆಯೆ? ಸಿಂಗಾರ ಬಂಗಾರ ಮಾಡಲು ಅವರಿಗೆ ಕಾಲಾವಕಾಶ ಬೇಕೇ ಬೇಕು. ಆದರೆ, ನೀನೀಗಲೇ ಖಡ್ಗವನ್ನೆತ್ತಿರುವೆ, ಇಕೊ! ವೀರಭದ್ರ ಬಂದಿರುವೆನು. ನಿನ್ನ ಕೈಯನ್ನು ಹಿಡಿದಿರುವನು....ಲೋ! ಫರದೆ ಬಿಡೋ" ಎಂದು ಹೇಳಿ, ನಾಟಕಾನ ಮುಗಿಸೇ ಬಿಟ್ಟರು.

ಅಂತೂ, ನಮ್ಮೂರು ಜನ ಈಗ ಪಂಚಾಯಿತಿ ಇಲೆಕ್ಶನ್ ಮಾರಾಮಾರಿಯನ್ನು ಸಂಪೂರ್ಣ ಮರೆತಿದಾರೆ. ಈಗ ನಡೆಯುತ್ತಿರುವುದು, ಅದಕ್ಕಿಂತ ಜೋರಾದ ಹರಿಶ್ಚಂದ್ರ ನಾಟಕದ ಟೈಂನಲ್ಲಿ ಹುಟ್ಟಿಕೊಂಡ ಮಾರಾಮಾರಿ.

—ನಾ. ಕಸ್ತೂರಿ.




ಪ್ರೈಮರಿ ಶಾಲಾ ಮಾಸ್ತರು (ಸ್ವಲ್ಪ ತಡವಾಗಿ ಡಿಗ್ರಿ ಪಡೆದಾಗ)

—ಸದ್ಯ! ಇನ್ನುಮೇಲೆ ಮಿಡಲ್ ಸ್ಕೂಲಿಗಾದರೂ ವರ್ಗ ಮಾಡ್ತಾರೇನೋ. ನೋಡಬೇಕು! ಅದೃಷ್ಟ!!

# ಏನು ಮಾಡುವುದು, ಸ್ವಾಮಿ ?



(ತಂದೆಗಳು ಹಾಕಿದ ಪ್ರಶ್ನೆ)

೧. ನನಗೆ ವರಮಾನ ತಿರಿಗೆ ಕಛೇರಿಯಲ್ಲಿ ಕೆಲಸ. ಸ್ವಲ್ಪ ಭಾರಿ ಹುದ್ದೇನೆ! ಮೂರು ವರ್ಷದ ಮಗ ಒಬ್ಬ. ಕ್ರಿಕೆಟ್ಟಿಂದ ಕೇರಿನವರೆಗೆ ಯಾವುದಕ್ಕೂ ಆತನಿಗೆ ಎಡಗೈಯೇ ಮುಂದು. ತಿದ್ದಲು ಎಷ್ಟೋ ಪ್ರಯಾಸ ಪಟ್ಟಾಯಿತು. ಏನುಮಾಡುವುದು, ಸ್ವಾಮಿ ?

ಉತ್ತರ:---ಮುಂದೆ ತಮ್ಮನ್ನೇ ಮೀರಿಸುತ್ತಾನೆ ಎನ್ನುವುದಕ್ಕೆ ಮುನ್ಸೂಚನೆ. ಊಟದಲ್ಲಿ, "ಇಂದಾಮ್ಮ, ತಚ್ಚಿ" ಎಂದಾಗ, ಮಗು ಎಡಗೈ ನೀಡಿದರೆ, "ಥು, ಕಕ್ಕ; ಆ ಕೈ ಅಸಹ್ಯ. ಈ ಕೈ ತೋರಿಸು" ಎಂದು ಬೆಳೆಯುವ ವೈರನ್ನು ಮೊಳಕೆಯಲ್ಲೇ ಕತ್ತರಿಸಬೇಡಿ. "ಹಾಗೆ, ಜಾಣ; ಮೆಲ್ಲಗೆ, ಜೋಬೊಳಗೆ—ಅಲ್ಲ, ಬಾಯೊಳಗೆ—ಇಟ್ಟುಕೋ" ಎಂದು ಭುಜ ತಟ್ಟಿ, ಬೆನ್ನು ಸವರಿ, ಮುದ್ದಿಟ್ಟು, ಮಗನನ್ನು ಮುಂದಕ್ಕೆ ತನ್ನಿ. ಹುಡುಗ, ಮುಂದಕ್ಕೆ ಖಂಡಿತ ಬರುತ್ತಾನೆ.

೨. ನನಗೆ ಮನೆ ಊಟವೂ ಸೇರೊಲ್ಲ; ಹೋಟಲ್ ತಿಂಡಿಯೂ ಸೇರೊಲ್ಲ. ಹಾಗಾಗಿ, ಹೀಗಾಗಿ, ಹಗಲೂ ರಾತ್ರಿ ಹಸಿವು. ಏನು ಮಾಡುವುದು ಸ್ವಾಮೀ ?

—"ಅಪ್ಪನ್ನ, ಅಮ್ಮನ್ನ, ನೋಡಬೇಕು ಅಂತಿದ್ದೆಯಲ್ಲಾ; ನನಗೋಸ್ಕರ ಒಂದು ಬುಟ್ಟಿ ತಿಂಡಿ ಮಾಡಿಟ್ಟುಬಿಟ್ಟು, ಒಂದೆರಡು ದಿನ ತೌರುಮನೆಗೆ ಹೋಗಿ ಬಿಟ್ಟುಬಾ" ಎಂದು ಆಕೆಯನ್ನ ತೌರುಮನೆಗೆ ರವಾನಿಸಿ. ಯಾವ ಆಕೆಯೂ, ತೌರುಮನೆ ಎಂದರೆ, ಯಾವ ಆತನನ್ನೂ "ಏಕೆ, ಏನು" ಎಂದು ಹಿಂಸಿಸುವುದಿಲ್ಲ. ಬುಟ್ಟಿ ತಿಂಡಿ ಮುಗಿಯುವವರೆಗೆ, ಮನೆ ತಿಂಡಿ, ಹೋಟಲ ಊಟ ಮಾಡಿ ನೋಡಿ. ಅದೂ ಬೇಸರವಾದರೆ....ಕಾಷಾಯವೇ ಕಲ್ಪತರು; ಮುಂಡನವೇ ಮೋಕ್ಷ.

—ಅಷ್ಟಾವಕ್ರ.

# ಪತ್ರಿ ಪಾಂಡು

ಕಾನಡೆ

ಲಗ್ನ ಮೇ ತಿಂಗಳೊಳಗಾಗಿ ಆಗುವದೆಂದು, ಕವಡೆಯ ಆಧಾರದಿಂದ ಉಸುರಿದ ಭಟ್ಟರ ಮಾತಿನಂತೆ, ಅವಧಿ ಮುಗಿಯಲು, ಎಂಟೇ ದಿವಸ ಉಳಿಯಿತು, ಭಟ್ಟರ ಭವಿಷ್ಯದಲ್ಲಿ ಭರವಸೆ ಇದ್ದಂತೆ, ತಾಳಿ ಕಟ್ಟುವ ಯೋಗ, ಬಂದೇ ತೀರುವದೆಂದು ಮನಸ್ಸಿಗೂ ಖಾತ್ರಿ ಇತ್ತು. ಇಷ್ಟರಲ್ಲಿ ಹಲವಾರು ಹೆಣ್ಣು ಶೋಧಿಸಿದರೂ, ಜಾತಕ ಕೂಡಿ ಬರಲಿಲ್ಲ ಚತುರ್ಭುಜ ಮಾಡಿಕೊಳ್ಳುವವನಿಗಿಂತ, ಇದ್ದ ತಾಯಿಯ ಕುತೂಹಲ, ಚೈತನ್ಯ ಹೆಚ್ಚಿತ್ತು. ಆದರೆ ಜಾತಕ ಕೂಡಿ ಬರಬೇಕಲ್ಲ? ಅಂತೂ ಇನ್ನೊಂದು ಕಡೆಗೆ ಅದೆಯೆಂದು ಫೋಟೋ ಸಹಿತ ಕರೆಬಂತು. ಫೋಟೊ! ನೋಡಿ ಫಸಿ ಬೀಳುವದಕ್ಕಿಂತ, ಪ್ರತ್ಯಕ್ಷ ಭೆಟ್ಟಿ ಒಳಿತೆಂದು, ಗೆಳೆಯನ ಜೊತೆಗೆ ಹೋದೆ. ನಾನು ಎಂದಿಗೂ ಆಡಂಬರ ಮಾಡಿಕೊಂಡು ಹೋದವನಲ್ಲ, ಹೋಗುವವನೂ ಅಲ್ಲ. ಕಾರಣ ಪರೀಕ್ಷಿಸುವದು ಹೆಣ್ಣನ್ನು, ಗಂಡಲ್ಲ. ಆದರೆ ನನ್ನ ಗೆಳೆಯನನ್ನು ಕರೆದದ್ದೇ ತಪ್ಪು, ಖಡಕ್ ಇಸ್ತ್ರಿಯ ವಸ್ತ್ರವನ್ನೇ ತೊಟ್ಟುಕೊಂಡು ಬಂದ. ಹುಡುಗೆಯ ಮನೆಗೆ ಹೋದೆವು, ಆದರದಿಂದ ಕೂಡ್ರಿಸಿದರು. ಹುಡುಗಿ ಬೆಳಕಿಗೆ ಬಿದ್ದದ್ದೇ ತಡ, ನನ್ನ ಗೆಳೆಯನನ್ನು ನೋಡಿದ ಕಣ್ಣು ಮುಚ್ಚಲೇ ಇಲ್ಲ. ನನಗೆ ಈ ಕಹಿ ನೋಡಿ, ಸಹಿಸದಾಯಿತು. "ಲಗ್ನವಾಗ ಬಂದವನು ನಾನು, ಅವನಲ್ಲ" ಎಂದು ಹೇಳಿದೆ. ಈ ಮಾತನ್ನು ಅವಳ ತಂದೆ ಅವಳಿಗೆ ಸೂಚಿಸಿದರೂ, ನನ್ನ ಕಡೆಗೆ ಲಕ್ಷವೇ ಇಲ್ಲ. "ನನ್ನ ದುರ್ದೈವ, ಕರಕೊಂಡು ಬಂದದ್ದೇ ನನ್ನ ದೊಡ್ಡ ತಪ್ಪು. ಇರಲಿ, ಎಷ್ಟೆಂದರೂ ಲಗ್ನದ ಮೊದಲಿಗೆ, ಒಂದು ಹೆಣ್ಣಿಗೆ ೧೦೦ ಗಂಡು, ಒಂದು ಗಂಡಿಗೆ ೨೦೦ ಹೆಣ್ಣು. ದೋಷವಿಲ್ಲ, ಚಿಂತಿಸಿ ಫಲವೇನು?" ಎಂದು ವಿಚಾರಿಸಿ, ಹೆಸರು ಕೇಳಿದೆ. 'ಸತಿ' ಎಂದಳು. "ಪತಿಯಾಗ ಬಂದವರಿಗೆ ಸತಿ ನೀನೇ? ಅಥವಾ ನಿನ್ನ ಹೆಸರು? ಎಂದು ನನ್ನ ಶೈಲಿಯನ್ನು ವೆಕ್ತಮಾಡಿದೆ. ಆ ಮಾತಿಗೆ ನೆರೆದವರೂ ನಕ್ಕರು. ಅವಳೂ ನಕ್ಕಿ ಸೆರಗು ಓರೆ ಮಾಡಿದ್ದು, ನೋಡಿದೆ. ಕಣ್ಣು ಅವನಮೇಲೆ, ಭಾವ ಮನದಲ್ಲಿ. ಕಣ್ಣಿನ ಗಾರಡೀ ಮಂತ್ರಕ್ಕಿಂತ ಮನದ ಮಂಕು ಶ್ರೇಷ್ಠ ಇದನ್ನು ಬೀಜ ಗಣಿತದ ಆಧಾರದಿಂದ ಬಿಡಿಸಿ, ಇಂಥ ನಸುನಗುವ ಹೆಣ್ಣನ್ನು ಬಿಟ್ಟರೆ ನನ್ನ

ಗೆಳೆಯ ಚಾನ್ಸ ಹೊಡೆಯಬಹುದು. ಇಂದಿನ ಮಿತ್ರರ ಇಂದ್ರಜಾಲ ತಿಳಿಯು ವದು ದುಸ್ತರ. ಇದು ನನ್ನ ಅನುಭವದ ಮಾತು. ಇಷ್ಟೇಕೆ? ಚಹಾದಂಗ ಡಿಗೆ ಹೋದಾಗ, ನಾ....ನಾ....ಎಂದು ಪಾಕೀಟು ತೆಗೆಯುವುದೇ ತಾಸು. ಇಂಥ ಕ್ಷುಲ್ಲಕ ವಿಷಯವಿರಲಿ ಜೀವನದ ವಿಷಯ. ಮಹತ್ವಾದ್ದು. ಮೋಸ ಹೋಗಬಾರದು, ಎಂದು ತ್ರೈರಾಶಿಕ ಹಾಕಿ, ಒಂದುವೇಳೆ ಜಾತಕ ಕೆಟ್ಟರೂ ಹೆಣ್ಣು ಕೆಟ್ಟಿಲ್ಲ ಎಂದು ನಿರ್ಧರಿಸಿ....ಹೋಗಲು ಅಪ್ಪಣೆ ಕೊಟ್ಟೆ. ಬೇರೆ ಖೋಲಿಯಲ್ಲಿ ಚಹಾಪಾನದ ವ್ಯವಸ್ಥೆ ಮಾಡಿದ್ದರು ಒಳ ನುಗ್ಗಿ, ಬೇಕಷ್ಟು ಹಿಗ್ಗಿ, ಜಾತಕದೊಂದಿಗೆ ಹೊರಬಿದ್ದೆ. "ಹೆಣ್ಣು ಮೆಚ್ಚಿದೆ. ಜಾತಕ ತಂದಿದ್ದೇನೆ" ಎಂದು ತಾಯಿಗೆ ಹೇಳಿದೆ. ಜಾತಕ ಭಟ್ಟರಿಗೆ ತೋರಿಸಿಯಾಯಿತು. ಆದರೆ ಜಾತಕ ನೋಡಿದ ಭಟ್ಟರ ಬಾಯಿಂದ "ಸತಿಗೆ ಪತಿಯಾದವಗೆ ಗತಿಗೇಡು. ಮಧ್ಯಕಾಲದಲ್ಲಿ ವಿರಹ ತಾಪ. ಮತಿಗೇಡು" ಇಂಥ ಶಬ್ದಗಳು ಹೊರಟಿತು. ಹೇರಳವಾಗಿ ದುಡ್ಡು ಕೊಡುವೆ, ಸರಿ ಹೇಳೆಂದು ಹೇಳಿದರೂ "ದುಡ್ಡಿನ ಜಾತಕ ಮುಂದೆ, ಈಗ ನೋಡಿದ್ದು ಹೆಣ್ಣಿನ ಜಾತಕ." ಎಂದು ನಿರ್ಧಾರ ಧ್ವನಿಯಲ್ಲಿ ಉಸುರಿದರು.

ನಾನಂತೂ ಅದೇ ಕನ್ಯೆ ಆಗ ಬಯಸಿದವ. ವಿರಹದ ಸಹರಾ ದಾಟಿದರೂ ಚಿಂತೆಯಿಲ್ಲ. ಅವಳಿಲ್ಲದೆ ಬೆಳಕಿಲ್ಲ ಹಗಲೇ ಕತ್ತಲೆ. ಎಂದು ನಾನೂ ಖಡಾ ಖಡಿಸಿದೆ. ನನ್ನ ವಿಚಾರದ ಮುಂದೆ ತಾಯಿಯ ಪುಂಗಿ ಅಡಗಿತು. ಲಗ್ನಕ್ಕೆ ಸಿದ್ಧಳಾದಳು. ಆಯಿತು ಲಗ್ನ. ಸಂಸಾರ ರಥ ಸಾಗುತ್ತಿತ್ತು.

ದಿನ ತಿಂಗಳಾಗಿ, ಋತು ಮಾನ ಸುರಿಸಿ ವರ್ಷ ವರ್ಷಗಳು ಕಳೆಯಿತು. ಪತ್ನಿಯೊಂದಿಗೆ ಹೆಗಲಿಗೆ ಹೆಗಲಾಗಿ, ಸೀಟಿಗೆ ಸೀಟಾಗಿ, ನೋಟಕ್ಕೆ ಮಾಟಾಗಿ, ರೋಮಿಯೋ ಜೂಲಿಯೆಟ್ ಆಗಿ, ಒಂದಾಗಿ ಓಡಾಡಿ, ಗಾರ್ಡನ್ ಸಿನೇಮಾ ಆಗಿ, ಎಲ್ಲವನ್ನು ನಮ್ಮದನ್ನಾಗಿ ಮಾಡಿ, ಆಕ್ರಮಣ ಧೀರನಾದರೂ, ಒಂದು ಮಾತು ಎದೆಗೆ ಲತ್ತೆ ಹೊಡೆದಂತೆ, ನೆನಪಿನ ನೋವುಂಟು ಮಾಡುತ್ತಲಿತ್ತು. ಮೋಹದಿಂದ ಉಕ್ಕಿ, ಸಿಕ್ಕಿ, ಇದೇ ಆಗುವೆನೆಂದು ಹೇಳಿದ ಮಾತು ಕರಗಿ, ಎಂದು ವಿರಹದ ಬೇಗೆ ಬುಗ್ಗೆನ್ನುವದೋ? ಎಂದು ಚಿಂತೆಯೊಳಗಾದೆ. ನನ್ನವಳಿಗೆ ತಲೆನೋವು ಎನ್ನುವದೇ ತಡ, ಹಕೀಮ, ಮಂತ್ರವಾದಿ, ಡಾಕ್ಟರರಿಗೆ ನನ್ನ ಮನೆಯ ಒಂದು ಭಾಗವನ್ನೇ, ಅವರ ಬಿಡಾರ ಮಾಡಿಸಲು, ವ್ಯವಸ್ಥೆ ಮಾಡಿದೆ. ಅಂತೂ ವಿಚಾರದ ಜೊತೆಗೆ ಒಮ್ಮೆ ಶೀತ ಬಂತು. ನನ್ನ ಎಲ್ಲ ಐಶ್ವರ್ಯ ನೀಡಿ, ಅವಳ ಉಸಿರು ಸರಿಪಡಿಸುವಂತೆ ಮಾಡಬೇಕಾದರೆ, ನನ್ನ ಮನೆಯೋ ತೊಳೆಯಿತು ಪಾಪರರ ಪಾಪರಾದೆ ಮಾಡಬೇಕೇನು? ಕೆಟ್ಟ

ಪೊಟ್ಟೆಯಂತೆ, ಭಟ್ಟನ ಮಾತು ನಟ್ಟಿದ್ದು, ಈ ರೀತಿ ನನ್ನನ್ನು ನೀರು ನೀರು ಮಾಡಿತು. ಏನೇ ಆಗಲಿ ಬದುಕಿದಳಲ್ಲ! ಇದು ನನ್ನ ಒಂದು ಹೆಮ್ಮೆಯಿಂದೇ ಎದೆ ತಟ್ಟಿದೆ. ದುರ್ದೈವ ಬಡವನನ್ನಾಗಿ ಮಾಡಿದರೂ, ನನ್ನಲ್ಲಿ ಅಡುವಿಟ್ಟ ಮಾಲೂ ಕಳುವಾಯಿತು. ಜನರಿಂದ ಲಫಂಗ ನೆನಿಸಿಕೊಂಡೆ. ಹೊಟ್ಟೆಗೆ ಹಿಟ್ಟಿಲ್ಲ, ಸಿನೇಮಾ ಗಾರ್ಡನ್ ಎಲ್ಲಿ? ಇರಲಿ! ನಳ ದಮಯಂತಿಯರಂತೆ, ನಮ್ಮದೂ ಒಂದು ಜೀವನ. ಇದ್ದುದರಲ್ಲಿ ಸುಖ ಎಂದು ಸ್ವಲ್ಪ ದಿವಸ ಕಳೆ ಯುವುದರೊಳಗಾಗಿ, ಪುನಃ ಮಡದಿ ಹೊಟ್ಟೆ ಹಿಡಿದು ಹಾಸಿಗೆ ಹುಡುಕುತ್ತ ಓಡಿದಳು ನನ್ನ ಕಾಲು ತಣ್ಣಗಾಯಿತು. ಡಾಕ್ಟರರು ಇದ್ದೆಡೆಗೆ ಓಡಿದೆ. ಬಂದು ನೋಡಿದರು. ಬೆಳಗಾಗುವದರೊಳಗಾಗಿ ಬದುಕಿದರೆ ನಿನ್ನ ದೈವ, ಇಲ್ಲವಾದರೆ ದೈವದ ಹಿಂದೆ 'ದುರ್' ಹಚ್ಚು. ಸುಳ್ಳೇ ಹುಸಿಮುದ್ದು ಹುಚ್ಚೆ! ಎಂದು ತಂದ ಬ್ಯಾಗು ಪರತ್ ಒಯ್ದರು.

ರಾತ್ರಿ ಭೀಕರ, ಹಿಂದಿಲ್ಲ, ಮುಂದಿಲ್ಲ, ತಂದೆ ಮೊದಲಿಗೆ ಇಲ್ಲ. ಮುದಿ ತಾಯಿ ಬಡ ರೇಷನ್ನಿಗಂಜಿ, ಗಂಜಿ ರುಚಿಸದೆ ಮೂತಿ ಗುಂಪಾದಳು. "ನನಗ್ಯಾರು, ಯಾರು ನನಗೆ? ಇಂದು ಸತಿಗೆ ಮತಿಯಿಲ್ಲ, ಪತಿಯನ್ನು ಬಿಡು ವದೇ ನಿಶ್ಚಯ. ಮುಂದೇನು? ಮುಂದೇನು?? ಎಂದು ವಿಚಾರಿಸುವದರೊ ಗಾಗಿ, ಥಟ್ಟನೆ 'ಸತಿ ಸಾವಿತ್ರಿ'ಯ ನೆನಪು ಬಂತು. "ಈ ಲೋಕದಲ್ಲಿ ಪತಿ ಗಾಗಿ ಬಡಿದಾಡಿದ ಸತಿಯರೇ ಹೆಚ್ಚು, ಆದರೆ ಪತಿ, ಸತಿಗೇಕೆ ಬಡಿದಾಡ ಬಾರದು? ಯಾವ ಯಮ, ನನ್ನ ಸತಿಯ ಸತ್ವ ಹೀರುವವ? ನೋಡುವೆ ಒಂದು ಕೈ" ಎಂದು, ಹೊರಗಣ್ಣು ಮುಚ್ಚಿ ಒಳಗಣ್ಣು ತೆರೆದೆ. ನಾಯಿ ಕುಯ್ಯೋ ಎಂದು ಮರುಗಾಡುತ್ತಿತ್ತು. ಇನ್ನು ಏನೇನೋ ಚಿರ್! ಚಿರ್!! ಎಂಬ ಅಪಶಬ್ದದಲ್ಲಿ ನಾ ನಿಶಬ್ಬನಾದೆ.

* * *

ಯಮ ಬಂದ. ಎಲ್ಲೆಡೆಯಲ್ಲಿಯೂ ಶಾಂತಿ. ಸಂಗಡ ಕೋಣ ವಿರ ಲಿಲ್ಲ. ಕತ್ತೆಯೊಂದಿಗೆ ಬಂದಿದ್ದ. ಎಲ್ಲಿದೆ ಅಮರರಿಗೆ ಪ್ರಾಣಿಗಳಲ್ಲಿ ಭಿನ್ನ ಭೇದ? ನನ್ನ ದೈವವೆನ್ನಬೇಕು. ಕತ್ತೆ ನಡೆಯಲೂ ಕತ್ತೆ. ಓಡಿ ಹಿಡಿಯು ವದು ಎಷ್ಟರ ಮಾತು? ಯಮರಾಜ ಗಾಣಹಾಕಿ ಸತಿಯ ಸತ್ವದೊಂದಿಗೆ ಹೊರ ಹೊರಟ. ನಾನು ಬಿಡದೇ ಬೆನ್ನು ಹತ್ತಿದೆನು.

ಯಮ:—ಎಲೋ ಪಾಂಡು, ನಿನಗಿಲ್ಲ ಪರಲೋಕದೊಳ್ ನಿಲಯ, ಬರ ದಿರು! ಬರದಿರು !!

ಪಾಂಡು:—ಮಡದಿಯುವ್ ತೊರೆದು ಸಾನಿರೆ, ಬಿಡು ಎನ್ನ ಸತಿಯ ಸತ್ವ!

ಯ:—ಆಟವಾಡದಿರ್, ವಾಹನ ಕತ್ತೆ ಅದರೊಂದೊತ್ತಕ್ಕೆ ನೀ ಸತ್ತೀ! ಜೋಕೆ!! ಹಿಂತಿರುಗು!!!

ಪಾ:—ಇರಲಿರಲಿ, ನಾನರಿವೆ. ನನಗಿದೆ ಮೃತ್ಯು ಲೋಕದೊಳ್ ಅತಿ ಅವಧಿ.

ಯ:—ಕಾಡದಿರು ಪಾಂಡೂ, ನಿನಗಿದೆ ಸತಿಯ ದೇಹ. ಸತ್ವ ಕೊಡೆ.

ಪಾ:—ನನಗೇಕೆ ಬರಡು ದೇಹ? ಕೊಡು ಎನಗೆ ಸತಿಯವ್ ಜೀವ ದೊಡೆ.

ಯ:—ಇಲ್ಲಿಲ್ಲ. ಬಯಸಿದೊಡೆ, ನಾಲ್ಕು ವರ ಪಡೆ.

ಪಾ:—ಸಂತೋಷ! ಸಂತೋಷ!! ಹಿಗ್ಗಿಗೆ ಎಣೆ ಇಲ್ಲ ಯಮರಾಜ!!! ನನ್ನ ಮುದಿ ತಾಯಿಗೆ ರೇಷನ್ ಕಾಳು ರುಚಿಸುವಂತೆ ಮಾಡು.

ಯ:—ಇನಿತೆ? ಇದೇ ನೀಡಿದೆ.

ಪಾ:—ಅಡವಿಟ್ಟ ಆಭರಣ ಕಳುವಾಗಿ ಜನರಿಂದ ಲಫಂಗ ನೆನಿಸಿದೆ. ಮುಟ್ಟಿದ ಪಾವತಿ ದಯಪಾಲಿಸು.

ಯ:—ಅನುಗ್ರಹಿಸಿದೆ.

ಪಾ:—ನನ್ನತ್ತೆ ಬರುವದು ಮಿತಿ ಇಲ್ಲ. ಬಂದವಳು. ರುತು ಮಾನ ಕಳೆದರೂ ಬಿಡಳು ಮನೆ. ಮತಿಗೆಟ್ಟು ಸತಿಯೊಡನೆ ಮಾತು ಬಿಡಲಿದ್ದೆ. ಬಂದೆರಡು ದಿನದಲ್ಲಿ ಓಡಿಸುವ ದಿವ್ಯ ಶಕ್ತಿ ನೀಡು.

ಯ:—ಹೂಂ! ಕೊಟ್ಟೆ ಇನ್ನೇನು, ಇನ್ನೇನು ಬೇಡುವೆ ಪಾಂಡೂ!

ಪಾ:—ನಾ ಅರ್ಧಾಂಗ ಪೂರ್ಣಾಂಗ ಮಾಡು!

ಯ:—ಮೂರ್ಖ! ಅದನೇಕೆ ಬೇಡುವೆ? ನೀ ಪೂರ್ಣಾಂಗನಿರುವಿ ಹೋಗು!;

ಪಾ!—ಹೋಗುವದೆಲ್ಲಿ ಯಮರಾಜ? ನಾನ್ಹೇಗೆ ಪೂರ್ಣಾಂಗ ಹಿಗ್ಗಿಸಿ ಹೇಳು? ಒಂದಡಿ ಮುಂದೆ ಬಿಡೆ· ಈ ಜಗದಿ ಜೋಡಿ ಸತಿ ಪತಿಯರೇ

ಪೂರ್ಣಾಂಗ. ನಾನಲ್ಲ ಪೂರ್ಣಾಂಗ. ನಾ ಅರ್ಧಾಂಗ. ಈ ಜಗದೋಳ್ ಕವಿಮತವೇ ಜನಮತ ನಿನಗೆಲ್ಲಿದೆ ಮತಿ?

ಯ:—ಪಾಂಡು, ನೀ ಗಂಡು ಇರುವೆ! ಆಗು ಮತ್ತೊಂದು ಮದುವೆ. ಪೂರ್ಣಾಂಗನಾಗುವೆ.

ಪಾ:—ಇಲ್ಲಿಲ್ಲ. ಈ ಹಕ್ಕು ನಮ್ಮ ಹೊಸ ಭಾರತದೊಳ್. ಒಂದಕ್ಕೆ ಒಂದು ಹಕ್ಕು, ಎರಡು ಆದೊಡೆ ತುರುಂಗದೆಡೆ ದಿಕ್ಕು. ಮೇಲಾಗಿ ನನ್ನ ವಯಸ್ಸು ನಲ್ವತ್ತಕ್ಕೆ ಮೀರಿದೆ. ನನಗೆಲ್ಲಿ ಇನ್ನೊಂದು ಹಕ್ಕು?

ಯ:—ಮೋಸ! ಇದು ನಾನರಿಯೆ!! ತೆಗೆದುಕೋ ನಿನ್ನ ಸತಿಯ ಸತ್ವ!!! ಸುಖದಿ ಬಾಳು!!!

---




ಯಾಕ್ರೋ ಹಾಗೆ ನಗುತೀರಿ, ತಲೆಮೇಲೆ ಗುಬ್ಬಚ್ಚಿ ಕೂತಿದೆಯೆ?

# ಆರಿದ ಕೆಂಡ

ಉತ್ಸಾಹೀ ಬರಹಗಾರರೊಬ್ಬರು ಒಮ್ಮೆ ನನ್ನ ಹತ್ತಿರ ಬಂದರು—ಯಾರೋ ಹೇಳಿದ್ದರಂತೆ ನಾನು ಕತೆ ಬರೆಯುತ್ತೇನೆಂದು—ಅವು ಪ್ರಕಟವಾಗಿವೆಯೆಂದು. ಸರಿ... "ಕತೆ ಒಂದೇ ಮಗ್ಗುಲಲ್ಲಿ ಬರೆಯ ಬೇಕೆ?...." ಎಂದು ಕೇಳಿದರು ಮುಂಚೆ.

"ನಾನೇನೋ ಒಂದೇ...."

"ಮಾಡೋಕ್ಕೆ ಕೆಲಸವಿಲ್ಲ.... ಕನ್ನಡ ಪತ್ರಿಕೆಗಳ ಲಕ್ಷಣಕ್ಕೆ...."

"....ಹೂ ಹಾಳಾಗಲಿ....ಸಾರ್....ನನಗೆ ಕತೆ ಬರೀಬೇಕೂಂತ ಬಹಳ ದಿನದಿಂದ ಆಸೆ....ನನ್ನ ಪ್ರಯತ್ನವಿಲ್ಲದೆಯೇ, ಹೃದಯದಿಂದ ಉಕ್ಕಿ ಹರಿಯುತ್ತಿವೆ ವಸ್ತುಗಳು, ಭಾವನೆಗಳು....ಅದೆಲ್ಲ ಬರೆದಿಡುತ್ತಿದ್ದೇನೆ....ಕಳಿಸೋಣ ಯಾವುದಾದರೂ ಪತ್ರಿಕೆಗೇ....ಽ....ಅಂತ...."

"ಕಳಿಸಿ....ಕಳಿಸಿ...."

"ಏನೋ ತಾವೂ ಕತೆ ಬರೀತಿರಾಂತ...."

"ಹಾದು....ನಾನೂ ಬರೀತಿದ್ದೆ...."

"ಈಗ ಯಾಕೆ ಪುರಸೊತ್ತಿಲ್ಲವೆ...ಬಿಡಬಾರದು....ಅದೊಂದು ಒಳ್ಳೆಯ 'ಹಾಬಿ'...."

"ಹೌದ್ಹಾದು...." ಎಂದೆ ದೇಶಾವರದ ನಗೆಯಿಂದ....

"ಇದನ್ನ ಕಳಿಸ್ತೀನಿ ..ಕನ್ನಡದ ಸೇವೆಯೇ ನನ್ನ ಉದ್ದೇಶ....ಅಲ್ಲ ಸಾರ್, ತಮಿಳಿನಲ್ಲಿ, ಮರಾಠಿಯಲ್ಲಿ ಕತೆ ಬರೆದರೆ ಅವರು ದುಡ್ಡು ಕೊಡ್ತಾರಂತೆ....ನಮ್ಮವರು...."

"ನಾನೇನು ಹೇಳಲಿ ..."

"ಏನೋ ನಾನಂತೂ ರಿಜಿಸ್ಟರ್ಡ್ ಪೋಸ್ಟ್‌ನಲ್ಲಿ ಕಳಿಸ್ತೀನಿ...."

"ಬರಿಯ ಬುಕ್‌ಪೋಸ್ಟೇ....ಸಾಕು"

"ಯಾಕೆ... ಸರಿಯಾಗಿ ತಲುಪುತ್ತೋ ಇಲ್ಲವೋ?"

"ಹೂ ಬರ್ತೀನಿ ನಮಸ್ಕಾರ ..." "ನಮಸ್ಕಾರ .." ಎಂದೆ ...

* * *

....ಒಂದೆರಡು ತಿಂಗಳಾಯಿತು, ತಿರುಗಿ ಅವರ ದರ್ಶನಕ್ಕೆ.

"ಏನುಸಾರ್ ಇದು ಅನ್ಯಾಯ....ಒಂದು ಕತೆ ಕಳಿಸಿದರೆ ಬಂದು ತಲುಪಿದ್ದಕ್ಕೆ ಕಾಗದ ಬೇಡವೆ? ನಾಲ್ಕೆಂಟು 'ರಿಪ್ಲೆ' ಕಾರ್ಡು ಬರೆದರೂ ಬದಲೇ ಇಲ್ವೆ? ಏನುಸಾರ್ ಅನ್ಯಾಯ ...ಎಲ್ಲಾನ ಉಂಟೆ....?"

"ಇದು ಹೊಸದಲ್ಲ ...ಸ್ವಾಮಿ....ಈಗಿನ ರಾಷ್ಟ್ರಕವಿ ಪೈಗಳವರಿಗೂ, ಬೇಂದ್ರೆಯವರಿಗೂ ಎಲ್ಲರಿಗೂ ಹೀಗೆಯೇ ಆಯಿತು ಮುಂಚೆ ಮುಂಚೆ...."

"ಹೋಗಿಸಾರ್...."

"ಕೋಪಿಸ್ಕೋ ಬೇಡಿ ...ತಾಳ್ಮೆ ಬೇಕು ಇವಕ್ಕೆಲ್ಲ...."

"ಹೋಗಿಸಾರ್....ಇವರು ಪಬ್ಲಿಷ್ ಮಾಡದೇ ಹೋದರೆ ನಾನೇ ಮಾಡ್ತೀನಿ...."

"............"ನಕ್ಕೆ........"ಬರ್ತೀನಿ ...ನಮಸ್ಕಾರ" "ನಮಸ್ಕಾರ........"

* * *

....ಮತ್ತೆ ತಿಂಗಳುಗಳು ಹತ್ತಿಪ್ಪತ್ತು ಕಳೆದಾದಮೇಲೆ ಸಿಕ್ಕಿದ್ದರು.

"ಈಗ ಯಾಕೋ ಕತೆಗಿತೆ ಬರಿಯೋಕ್ಕೇ ಬೇಜಾರಾಗಿಬಿಟ್ಟಿದೆ ಸಾರ್.... ಏನು ಬರೆಯಾಟವೋ ಏನೋ. ಎನ್‌ಕರೇಜ್‌ಮೆಂಟಿಲ್ಲ....ಹಾಳು...."

"ಅದು ಬಿಡಿ...."

"ಏನುಸಾರ್....ಎಂತೆಂಥ ಅರ್ಥವಿಲ್ಲದ ಕತೆಗಳನ್ನೆಲ್ಲ, ಪ್ರಕಟಿಸೋವಾಗ, ನನ್ನದೇನುಸಾರ್ ಕಡಿಮೆ....ನೀವೇ ಓದಿದ್ದರಲ್ಲ...."....

* * *

ಮತ್ತೆ ಕೊಂಚದಿನಗಳು ಕಳೆದುವು: ಅವರೇ ಬಂದರು. ಆಗ ಕತೆ-ಸಾಹಿತ್ಯ-ಕನ್ನಡ ಯಾವ ವಿಚಾರವನ್ನೂ ಎತ್ತಲಿಲ್ಲ....ಆದರೆ ಕೊನೆಯಲ್ಲಿ ಹೋಗುವಾಗ ಮಾತ್ರ, "ಯಾಕೆ ಸಾರ್ ಈಚೆಗೆ ತಮ್ಮ ಯಾವ ಕತೇನೂ ಬಂದಿಲ್ಲ ಎಲ್ಲೂ...." ಎಂದು ಕೇಳಿದರು.

ನಾನು ನಕ್ಕೆ—ಅವರೂ ನಕ್ಕು ಮುಂದೆ ನಡೆದರು.

—ಬಿ. ನ. ಮೂರ್ತಿ.



# ಯಕ್ಷಿಣಿ ಸರ್ಕಾರ್



---

(ಬರೆದು ಬಂದುದು)

ಖಾಲಿ ಡಬ್ಬದಿಂದ ಹಣ್ಣುಹಂಪಲು ತೆಗೆಯುವುದು, ಹಕ್ಕಿ ಪಕ್ಷಿಗಳನ್ನು ಒಂದು ಪೆಟ್ಟಿಗೆಗೆ ತುಂಬಿ ಮರುಕ್ಷಣದಲ್ಲಿ ಅದು ಖಾಲಿಯಾಗಿವುರುದನ್ನು ತೋರಿಸುವುದು, ಇತ್ಯಾದಿ ಎಲ್ಲಾ ಮಾಯುಗಾರರೂ ಮಾಡುವುದನ್ನು ಮಾಡಿ ತೋರಿಸಿದರು ಶ್ರೀ ಸರ್ಕಾರ್ ಅವರು.

ಮುಂದೆ ಸಾಗಿದಂತೆ; ಒಂದು ಹೆಣ್ಣು ಹುಡುಗಿಯನ್ನು ಅರ್ಧಕ್ಕೆ ಕುಯ್ಯುವುದು ತದನಂತರ ಆ ಹುಡುಗಿ ಎದ್ದು ಬಂದು ಎಲ್ಲರೆದುರಿಗೂ ನಿಲ್ಲುವುದು ಇತ್ಯಾದಿ ಕಣ್ಣು ಕಟ್ಟು ಮಾಯವನ್ನು ತೋರಿಸಿದರು—ಎಲ್ಲಾ ಜಾದುಗಾರರೂ ತೋರಿಸುವಂತೆ.

ಒಬ್ಬಾತನಿಗೆ ಹಿಪ್‌ನೊಟೈಸ್ ಮಾಡಿ ಅವನ ನಾಲಿಗೆಯ ತುದಿಯನ್ನು ಬಂದ ವೈದ್ಯರ ಕೈಯಲ್ಲಿ ಕತ್ತರಿಸಿ ತಿರುಗಿ ಸೇರುವಂತೆ ಪ್ರಯೋಗ ನಡೆಸಿದರು. ನೋಡಿದ ವೈದ್ಯರು ಹೊರಕ್ಕೆ ತಲೆಕೆರೆದುಕೊಂಡು ಬೆವರುತ್ತ ಬಂದರಂತೆ

ಯಕ್ಷಿಣಿಗಾರ ಕಣ್ಣು ಕಟ್ಟಿಸಿಕೊಂಡು ನಾವು ಬರೆದದ್ದನ್ನೆಲ್ಲಾ ಆತನೂ ಬರೆದು, ನಾವು ಪ್ರಾರಂಭಿಸಿದ ರೇಖೆಗಳಿಂದ ಚಿತ್ರವನ್ನು ಪೂರ್ಣಗೊಳಿಸುವ ಒಂದು ಮಾದರಿಯ ಮಾಟ ಮಾಡಿದರು.

ಮಿಕ್ಕ ಯಕ್ಷಿಣಿಯೆಲ್ಲಾ ಮಾಯಕ್ಕೆ ಸಂಬಂಧಿಸಿದುದು ಇಲ್ಲಿದ್ದವನು ಇಲ್ಲವೇ ಇಲ್ಲ ಕಣ್ಣೆದುರಿಗೇ !

ಜಾಡಿಯಲ್ಲಿ ಹಾಕಿದ ಕೈ ಗಡಿಯಾರ ಮಂಗಮಾಯ !

ಕೈಲಿದ್ದ ಪಂಜರ, ಪಂಜರದೊಳಗಿನ ಪಕ್ಷಿ—ಅಂಗನೆಯರು ಪಂಜರದ ಮೇಲೆ ಕೆಳಗೆ ಕೈ ಸುರಕ್ಷಿತವಾಗಿಟ್ಟಿದ್ದರೂ—ಕ್ಷಣದಲ್ಲಿ ಮಂಗಮಾಯ! ಪಂಜರದೊಳಗಿನ ಗಿಣಿ ಮಾತ್ರವಲ್ಲ ಪಂಜರವೆ ಮಂಗಮಾಯವಾಯಿತಲ್ಲಾ !!

ಕಣ್ಣೆದುರಿಗೆ ಬೊಂಬೆ ಮನೆಯಲ್ಲಿ ಒಂದು ಹುಡುಗಿಯನ್ನು ಹುಡುಗಿಯೇನು? ತಕ್ಕಮಟ್ಟಿಗೆ ಬಲಿತವಳನ್ನೇ—ಕೂರಿಸಿ, ಬಾಗಿಲು ಮುಚ್ಚಿ ತೆರೆದರೆ ಆಕೆ ಅಂತರ್ಧಾನ.

ಇತ್ಯಾದಿ—ಇತ್ಯಾದಿ—ಇತ್ಯಾದಿ.

* * *

ಹೊರಗೆ ಬರುವಾಗ ಕೇಳಿಬಂದ ವಿಮರ್ಶೆಗಳೇ ಸೊಗಸು. ಬಲುಚೆನ್ನು.

ಮಕ್ಕಳೊಂದುಗಿತ್ತಿ ಅಂದಳು—"ಯಾವುದೋ ಬಾಣಂತಿಹೆಣದ ಮೂಳೆಯನ್ನು ಅಮಾವಾಸ್ಯೆ ದಿನ ಆ ಮಂತ್ರದ ಕೋಲಿನಲ್ಲಿ ಇಟ್ಟಿರುತ್ತಾರೆ. ಆ ದೆವ್ವದ ಮಂತ್ರದ ಕೋಲಿನಿಂದಲೇ ಈ ಅಮಾನುಷ ಶಕ್ತಿ ಎಂದು.

ಇನ್ನೊಂದು ಕಾಲೇಜಿಗೆ ಹೋಗುವ ವನಿತೆ ಅಂದಳು.

"ಇದೆಲ್ಲಾ ಕೈ ಚಳಕ! ಅಭ್ಯಾಸದ ಮೇಲೆ ಬರುತ್ತೆ. ಆನೇನ ಕೂಡ ಕೆಲವರು ಕಂಕುಳಲ್ಲಿ ಮುಚ್ಚಿಟ್ಟುಕೊಳ್ಳುತಾರಂತೆ! ಎಲ್ಲಾ ಅಭ್ಯಾಸ!" ಎಂದು.

ಬಡ ಮುತ್ತೈದೆಯೊಬ್ಬಳು. ಜವಳಿ ಮಕ್ಕಳಿಗೆ ಹೇಳುತ್ತಿದ್ದಳು. "ಮನೇಲಿನ್ಮೇಲೆ ಗಲಾಟೆ ಮಾಡಿದರೆ ಇವನಿಗೆ ಹಿಡಿದು ಕೊಟ್ಟುಬಿಡ್ತೇನೆ ಅಳದೆ ಬನ್ನಿ—ಬಿಸ್ಕತ್ತು ಎಂದು ಅಳಬೇಡಿ" ಎಂದು.

ಕೇಸರಿ ಬಣ್ಣದ ಟೋಪಿಯವನೊಬ್ಬ ಅಂದೇಬಿಟ್ಟ "ಏನು! ಮಹಾ! ಸರ್ಕಾರ್!! ಒಂದು ಕೋಳಿ, ಒಂದು ಬಾತು, ಒಂದು ಪಂಜರ ಕ್ಷಣದಲ್ಲಿ ಇಲ್ಲದಂತೆ ಮಾಡಿದ! ಏನು ಮಹಾ!

ನಮ್ಮ ದೊಡ್ಡ ಸರ್ಕಾರ್ ನೋಡಿ, ಖಜಾನೆಯನ್ನೇ ಮಂಗಮಾಯ ಮಾಡಿದ್ದಾರೆ! ಕ್ಷಣಾರ್ಧದಲ್ಲಿ! ಎಂದು ಕುಹಕವನ್ನ ಆಡಿದ.

ಇವನಂದ ಮಾತನ್ನ ಕೇಳಿದ್ದನ್ನು ಯಾರಾದರೂ ನೋಡಿದರೆ ನನ್ನ ಗತಿ ಏನಪ್ಪಾ! ಎಂದು ನಾನು ಅಲ್ಲಿಂದ ಯಕ್ಷಿಣಿಮಾಡಿ ಮಂಗಮಾಯವಾದೆ!

— ಜಾದು ಬಚ್ಚ.

---

# ನಾನು ಶಾಂತಳ ಮದುವೆಗೆ ಹೋದುದು

---

ಇದು ಒಂದು ಮದುವೆಗೆ ಸಂಬಂಧಿಸಿದ ಪ್ರಣಯ ಕಥೆಯೆಂದು ನೀವು ತಿಳಿಯಬೇಡಿ. ಆದರೆ ನಾನು ಇಲ್ಲಿ ಮದುವೆಯ ಸಡಗರ ಸಂಭ್ರಮಗಳನ್ನಾಗಲೀ, ನಲ್ಲ-ನಲ್ಲೆಯರ ಸರಸ ಸಲ್ಲಾಪಗಳನ್ನಾಗಲೀ ವರ್ಣಿಸುವುದಿಲ್ಲ!! ನನ್ನ ಸೋದರ ಮಾವನ ಮಗಳು ಶಾಂತಳ ಮದುವೆಗೆ ಮೊನ್ನೆ ನಾನು ಬೆಂಗಳೂರಿನಿಂದ ಮೈಸೂರಿಗೆ ರೈಲಿನಲ್ಲಿ ಹೊರಟಾಗ ಪ್ರಯಾಣದಲ್ಲಿ ಸಂಭವಿಸಿದ್ದನ್ನು ಹೇಳುತ್ತೇನೆ ಅಷ್ಟೆ!

ಮೈಸೂರು ರೈಲು ಬೆಳಗ್ಗೆ ಏಳೂವರೆ ಗಂಟೆಗೆ ಹೊರಡುತ್ತೆಂದೂ, ಹೊತ್ತಿಗೆ ಮುಂಚೆ ಸ್ಟೇಷನ್‌ಗೆ ಹೋಗದಿದ್ದರೆ ರೈಲಿನಲ್ಲಿ ಜಾಗ ಸಿಗುವುದಿಲ್ಲವೆಂದೂ, ಸೀನು ನನಗೆ ಹಿಂದಿನ ದಿವಸವೇ ಹೇಳಿದ್ದ. ಅದರಂತೆ ನಾನು ಬೆಳಗ್ಗೆ ಎದ್ದು ಬಹಳ ಬೇಗ ಎಲ್ಲರಿಗಿಂತಲೂ ಮುಂಚೆಯೇ ಸ್ಟೇಷನ್‌ಗೆ ಹೋದೆ. ಅಷ್ಟುಹೊತ್ತಿಗಾಗಲೇ ಮೈಸೂರು ಕಡೆಗೆ ಹೋಗುವ ಪ್ರಯಾಣೀಕರು ಸ್ಟೇಷನ್ನಲ್ಲಿ ಸಿದ್ಧವಾಗಿ ಕೂತಿದ್ದರು! ಅವರನ್ನು ನೋಡಿದ ಮೇಲೆ ನಾನೇ ಎಲ್ಲರಿಗಿಂತಲೂ ಹೊತ್ತಾಗಿ ಬಂದವನೆಂದು ತಿಳಿಯಿತು! ರೈಲು ಇನ್ನೂ ಪ್ಲಾಟ್‌ಫಾರಂಗೆ ಬಂದು ನಿಂತೇ ಇರಲಿಲ್ಲ. ಎಲ್ಲರೂ ರೈಲು ಬರುವುದನ್ನೇ ಎದುರು ನೋಡುತ್ತಿದ್ದರು. ಬಹಳ ಹೊತ್ತಿನ ಮೇಲೆ ರೈಲು ಬಂತು. ಎಲ್ಲರೂ ಅದರ ಜೊತೆಯಲ್ಲೇ ಓಡುತ್ತ ಗಾಡಿಗಳಿಗೆ (compartments) ನುಗ್ಗಿ ಸ್ಥಳಗಳನ್ನಾಕ್ರಮಿಸಿಕೊಂಡರು. ರೈಲು ನಿಲ್ಲಲಿ ಎಂದು ನಾನು ಇನ್ನೂ ನಿಧಾನವಾಗಿಯೇ ಇದ್ದೆ. ರೈಲು ನಿಲ್ಲುವ ಹೊತ್ತಿಗೆ ಎಲ್ಲ ಗಾಡಿಗಳೂ ಭರ್ತಿಯಾದವು! ಒಳಕ್ಕೆ ಹೋದವರು ತಮ್ಮ ಸಾಮಾನುಗಳನ್ನೆಲ್ಲ ಬಾಗಿಲುಗಳ ಹಿಂದೆ ಭದ್ರವಾಗಿ ಪೇರಿಸಿ ಬಾಗಿಲುಗಳನ್ನ ಯಾರೊಬ್ಬರೂ ತೆಗೆಯುವುದಕ್ಕಾಗದಂತೆ ಮಾಡಿದರು! ಇದರ ಫಲವಾಗಿ ಜಾಗ ಸಿಗದ ಕೆಲವರು ಸ್ಟಂಟ್ ಚಿತ್ರಗಳಲ್ಲಿ ನಾಯಕನು ಹಾರುವಂತೆ ಕಿಟಕಿಗಳ ಮುಖಾಂತರ ಹಾರಿ, ಒಳಗಿದ್ದವರ ತಲೆಗಳ ಮೇಲೆ ಹಾದು ಮೇಲ್ಭಾಗದ ಸಾಮಾನು ಹಲಗೆಗಳನ್ನೇರಿದರು! ಹೀಗೆ ಮೇಲಡರುವಾಗ ಕೆಲವರು ತಮ್ಮ ಹರಕು ಚಪ್ಪಲಿಗಳನ್ನ ಕೆಳಗೆ ಕೂತಿದ್ದವರ ಮೇಲೆ ಇಳಿಬಿಟ್ಟರು! ನಾನು ಈ ಸರ್ಕಸ್ ದೃಶ್ಯಗಳನ್ನ ನೋಡಿ ನಲಿಯುತ್ತ ಒಂದು ಐದು ನಿಮಿಷ ಹಾಯಾಗಿ ನಿಂತುಕೊಂಡುಬಿಟ್ಟೆ!

ರೈಲು ಹೊರಡುವ ಹೊತ್ತು ಸಮೀಪಿಸುತ್ತ ಬಂತು. ಪ್ಲಾಟ್‌ಫಾರಂ ಗಡಿಯಾರ ಹನ್ನೆರಡು ಗಂಟೆ ತೋರಿಸುತ್ತಿತ್ತು. ಎಂಟು, ಹತ್ತು ನಿಮಿಷಗಳ ಅವಧಿಯಲ್ಲಿ ನಾನು ಎರಡು ಮೂರು ಸಲ ನೋಡಿದಾಗಲೂ ಅದು ಹಾಗೆಯೇ ಎರಡು ಕೈಗಳನ್ನೂ ಜೋಡಿಸಿಕೊಂಡು ನಮಸ್ಕಾರ ಮಾಡುತ್ತಿತ್ತು. ನಗುವ ಸಮಯವಲ್ಲ ಅದು. ನಾನು ತೀವ್ರವಾಗಿ ಹುಡುಕಲು ಪ್ರಾರಂಭಿಸಿದೆ. ಯಾವ ಗಾಡಿಯಲ್ಲಿ ಇಣಿಕಿದರೂ ಬೇರೆ ಗಾಡಿಗೆ ಹೋಗುವಂತೆ ಸಲಹೆ ಕೊಡುತ್ತಿದ್ದರು. ಅಷ್ಟು ಹೊತ್ತಿಗೆ "ರೈಲು ರಕ್ಷಕ" ತನ್ನ ಶಿಲ್ಪಿಯನ್ನ ಗುಡುಗುಟ್ಟಿಸಿದ! ಆತ ಎಷ್ಟು ಊದಿದರೂ ನಮ್ಮ ಎಂಜಿನ್ ಡ್ರೈವರ್‌ಗಳು ಸಾಮಾನ್ಯವಾಗಿ ತಕ್ಷಣ ಮನ್ನಣೆ ಕೊಡುವುದಿಲ್ಲವೆಂಬ ವಿಚಾರ ನನಗೆ ಗೊತ್ತಿದ್ದುದರಿಂದ ನಾನು ಒಂದು ಗಾಡಿಯೊಳಕ್ಕೆ ನುಗ್ಗಲು ಸಾಹಸಮಾಡಿದೆ. ಫುಟ್‌ಬೋರ್ಡಿನ ಮೇಲೆ ನಿಂತುಕೊಂಡೆ. ಅಲ್ಲೇ ಹೋಗುತ್ತಿದ್ದ ಒಬ್ಬ ಪೋರ್ಟರ್‌ನ್ನ ಕರೆದು ಅವನ ಕೈಗೆ ನಾಲ್ಕಾಣೆ ಕೊಟ್ಟು ಒಳಕ್ಕೆ ನೂಕು ಎಂದೆ. ರೈಲು ಹೊರಡುವವರೆಗೂ ಅವನು ಒಂದೇ ಸಮನೆ ನನ್ನನ್ನು ಗಾಡಿಯೊಳಕ್ಕೆ ನೂಕಿದುದರ ಫಲವಾಗಿ ನಾನು ಗಾಡಿಯಲ್ಲಿ ಸೇರಿಕೊಂಡೆ!

ನಾನು ನುಸುಳಿದ ಗಾಡಿಯಲ್ಲಿ ಹಾಸಿಗೆ, ಪೆಟ್ಟಿಗೆ, ಬುಟ್ಟಿ, ಕುಕ್ಕೆ ಮುಂತಾದ ಸಾಮಾನುಗಳು ಸಿಕ್ಕಾಪಟ್ಟೆ ಹರಡಲ್ಪಟ್ಟಿದ್ದವು! ಬೋರಲು ಹಾಕಿದ್ದ ಒಂದು ಕುಕ್ಕೆಯ ಮೇಲೆ ನಾನು ಕಾಲಿಟ್ಟದ್ದರಿಂದ ಆ ಕುಕ್ಕೆ ನನ್ನ ಭಾರಕ್ಕೆ ಬಿರಿದು ಒಳಗೆ ಅಡಗಿದ್ದ ಕೆಲವು ಕೋಳಿಗಳು ಈಚೆಗೆ ಬಂದು ಗಾಡಿಯಲ್ಲೆಲ್ಲ ಹಾರಾಡಿ ಸ್ವಲ್ಪ ಗದ್ದಲ ಮಾಡಿದವು! ಅಲ್ಲಿಯೇ ಕೂತಿದ್ದ ಆ ಕುಕ್ಕೆಯ ಒಡತಿ ನನ್ನನ್ನು ನುಂಗುವಂತೆ ನೋಡಿ ಒಂದೇ ಮಾತಿನಲ್ಲಿ "ನಿನಗೇನು ದೊಡ್ಡರೋಗ ಬಂದಿತ್ತ!" ಎಂದಳು. ಮುಂದಿನ ಮಾತುಗಳು ಕೇಳಿಸದೇ ಇರಲೆಂದು ನಾನು ಕಿವುಮುಚ್ಚಿ ನಿಂತುಕೊಂಡೆ!

ಕೆಂಗೇರಿಯಲ್ಲಿ ಕೆಲವು ಹೆಂಗಸರು ಬುಟ್ಟಿಗಳ ಸಮೇತ ನಮ್ಮ ಗಾಡಿಯೊಳಕ್ಕೆ ನುಗ್ಗಲು ಪ್ರಯತ್ನಿಸಿದರು. ಅವರ ವಾಕ್ ವೈಖರಿ ನನ್ನನ್ನು ಅಚ್ಚರಿಗೊಳಿಸಿತು. ಅವರು ಪ್ರಾಸ ಬದ್ಧವಾಗಿ ಗಾಡಿಯಲ್ಲಿದ್ದವರನ್ನು ಚೆನ್ನಾಗಿ ಬೈದು ಮಾನಭಂಗಮಾಡಿದರು. ಆ ಶಬ್ದ ಸಂಪತ್ತಿಗೆ ಮತ್ತೆ ಆಶೆಪಟ್ಟು ಕೆಲವರು ಬಾಗಿಲನ್ನ ತೆಗೆಯಲೇ ಕೂಡದೆಂದು ಹೇಳಿದರು. ನಾನು ಉದ್ದಕ್ಕೂ ನಿಂತುಕೊಂಡೇ ಬಂದುದರಿಂದ ಕಾಲು ಬಾಧೆ ಕೊಡಲು ಪ್ರಾರಂಭಿಸಿತು. ಅಷ್ಟು ದೊಂಬಿಯಲ್ಲೂ ನನ್ನ ಎದುರು ಸೀಟಿನಲ್ಲಿ ಒಬ್ಬರು ಸುಮಾರು ವಯಸ್ಸಾದವರು ಲಕ್ಷಣವಾಗಿ ಕೂತುಕೊಂಡು ಹೊಗೆ ಉಗುಳುತ್ತಿದ್ದರು. ಇಬ್ಬರ ಜಾಗವನ್ನ

ಅವರೊಬ್ಬರೇ ಆಕ್ರಮಿಸಿಕೊಂಡಿದ್ದರು ಚಲನಚಿತ್ರತಾರೆಯರ ಕೈಪಿಡಿಯೊಂದು ಅವರ ಕೈಯಲ್ಲಿತ್ತು. ಪ್ರಯಾಣಹೊರಟಾಗ ಒಂದೆರಡು ಪತ್ರಿಕೆಗಳನ್ನ ಕೊಂಡು ಜೊತೆಯಲ್ಲಿ ಒಯ್ಯುವ ಪದ್ಧತಿ ನನ್ನಲ್ಲೂ ಇದೆ! ಓದುವುದಕ್ಕಲ್ಲ! ಪ್ರಯಾಣದಲ್ಲಿ ಪತ್ರಿಕೆ ಕೈಯಲ್ಲಿರುವುದು ಒಂದು ತರಹ ಗೌರವವಷ್ಟೆ! ಅದರಂತೆ ಓರ್ವ ಸಿನಿಮಾ ತಾರೆಯ ವರ್ಣರಂಜಿತ ಮುಖ ಚಿತ್ರವಿದ್ದ ಒಂದು ಬಣ್ಣದ ಸಂಚಿಕೆಯನ್ನ ನಾನು ಆಗ ಜೇಬಿನಿಂದ ತೆಗೆದು ಆ ರಸಿಕರ ಮುಂದೆ ಹಿಡಿದೆ! ಅವರ ಕಣ್ಣುಗಳು ಅರಳಿತು. ಹೃದಯದಲ್ಲಿ ಸಂತೋಷ ಉಕ್ಕಿಬಂತು. ಆಗ ನಾನು ನಾಲ್ಕಾರು ಸಿನಿಮ ತಾರೆಯರ ಬಗ್ಗೆ ನನಗೆ ಗೊತ್ತಿಲ್ಲದ ವಿಚಾರಗಳನ್ನ ಅವರಿಗೆ ಬಹಳ ಸ್ವಾರಸ್ಯವಾಗಿ ಹೇಳಲು ಯತ್ನಿಸಿದೆ! ಹಾಗೆಯೇ ಅವರ ಪಕ್ಕದಲ್ಲಿ ಕೊಂಚ ಕೂತೆ. ಕೊಂಚ ಏನು? ತಕ್ಕಮಟ್ಟಿಗೆ ಚನ್ನಾಗಿಯೇ!

ರೈಲು ಒಂದೆರಡು ಸ್ಟೇಷನ್ ತಟಾಯಿಸಿದ ಮೇಲೆ ಇಡೀ ಗಾಡಿಯಲ್ಲಿ ಒಂದು ವಿಚಿತ್ರ ರೀತಿಯ ಮೌನ ಆವರಿಸಿತು ಪರಂಪರೆಯಾಗಿ ಆಕಳಿಕೆಗಳು ಎಲ್ಲರಿಗೂ ಮೇಲಿಂದ ಮೇಲೆ ಬರಲು ಪ್ರಾರಂಭವಾಯಿತು. ಕೆಲವರು ರೈಲಿನ ತೂಗಾಟಕ್ಕೆ ತಾಳ ಹಾಕುವವರಂತೆ ಕಂಡರು! ಚಿತ್ತಾಕರ್ಷಿತವಾದ ಈ ದೃಶ್ಯ ಗಳನ್ನ ನಾನು ನೋಡಿ ನಲಿಯುತ್ತಿರುವಾಲೇ ನನ್ನ ಹಿಂದಿನ ಸೀಟಿನಲ್ಲಿ ಕುಳಿತಿದ್ದ ಒಬ್ಬರು ತೂಕಡಿಸುವುದಕ್ಕೆ ಪ್ರಾರಂಭಿಸಿದರು. ಎದ್ವಾತದ್ವಾ ತೂಗಾಡುತ್ತಿದ್ದ ಅವರ ತಲೆ ಪ್ರಯಾಣಿಕರಿಗೆ ತುಂಬಾ ಗಾಬರಿಯುಂಟುಮಾಡಿತು. ಎಲ್ಲಿ ಕಳಚಿ ಬಿದ್ದುಬಿಡುತ್ತದೋ ಎಂಬ ಸಂದೇಹದಿಂದ ಪಕ್ಕದಲ್ಲಿ ಕೂತಿದ್ದವರೊಬ್ಬರು ತಮ್ಮ ಭುಜವನ್ನ ಆ ಬಾಗಿದ ತಲೆಗೆ ಆಸರೆ ಕೊಟ್ಟರು. ಅವರ ಸಹನಾ ಶಕ್ತಿಯನ್ನ ನೋಡಿ ನಾನು ಬೆರಗಾದೆ. ನನಗನ್ನಿಸಿತು—ಈ ರೀತಿ ಹತ್ತಾರು ತಲೆಗಳನ್ನ ರೈಲಿನಲ್ಲಿ ಹೊತ್ತೇ ಅವರು ಆ ಶಕ್ತಿಯನ್ನು ಸಂಪಾದಿಸಿಕೊಂಡಿರ ಬೇಕೆಂದು!

ಇದಾದ ಮೇಲೆ ಪಕ್ಕದಲ್ಲಿ ಕೂತಿದ್ದ ನನ್ನ ರಸಿಕ ಮಿತ್ರರೇ ಜೋಲುಮುಖ ಹಾಕಿದರು! ಸಿನಿಮಾ ತಾರೆಯ ಮುಖಚಿತ್ರವಿದ್ದ ಸಂಚಿಕೆಯನ್ನ ಅವರು ಕೈಯಲ್ಲೇ ಹಿಡಿದಿದ್ದರು. ಜೊಂಪೇರಿ ಅವರ ಮುಖದಲ್ಲಿ ಮಿಂಚುತ್ತಿದ್ದ ಹಾವ ಭಾವಗಳು, ಅವರೊಂದಿಗೇ ತೂಗಾಡುತ್ತಿದ್ದ ಆ ನಗುಮುಖದ ನಟಿಯ ನೃತ್ಯ ಭಂಗಿಯ ಚಿತ್ರ ಎಲ್ಲರ ದೃಷ್ಟಿಯನ್ನೂ ಸೆಳೆಯಿತು ನನ್ನ ಅರಿವಿಲ್ಲದೆಯೆ ಅವರಿಗೆ ನಡೆದ ನನ್ನ ತುದಿಗಾಲಿನ ಜೋಡಶೋಪಚಾರಕ್ಕೂ ಅವರು ಜಗ್ಗಲಿಲ್ಲ!

ರೈಲು ಚನ್ನಪಟ್ಟಣಕ್ಕೆ ಬಂದು ನಿಂತಿತು. ನನ್ನ ಎದುರಿಗೆ ಕೂತಿದ್ದವ ರೊಬ್ಬರು "ಸಾರ್... ಬೆಂಕಿಪಟ್ಟಣ!?" ಅಂತ ಅಂದರು. ನಾನು ನಿಧಾನ

ವಾಗಿ "ಅಲ್ಲ!....ಚನ್ನಪಟ್ಟಣ" ಅಂತ ಅಂದೆ. ಅವರ ಬಾಡಿದ ತುಟಿಗಳ ಸಂದಿ ನಿಂದ ಒಂದು ಸಿಗರೇಟ್ ಕಳಚಿ ಕೆಳಕ್ಕೆಬಿತ್ತು.

ಚನ್ನಪಟ್ಟಣದಲ್ಲಿ ನಮ್ಮ ಗಾಡಿಗೆ ಒಂದು ಬೀಗರ ಬ್ರಿಗೇಡೇ ಹತ್ತಿತು. ಆ ಬ್ರಿಗೇಡಿನ ಯಜಮಾನನು ಕೆಲವು ಟ್ರಂಕುಗಳನ್ನೂ, ಹಾಸಿಗೆಗಳನ್ನೂ ಗಾಡಿ ಯೊಳಕ್ಕೆ ಕಿಟಕಿಗಳ ಮುಖಾಂತರ ಎಸೆದನು!—ಹಾಗೆಯೇ ಮೂರು ನಾಲ್ಕು ಮಕ್ಕಳನ್ನೂ ಸಹ! ಆ ಮೇಲೆ ಉಳಿದ ಗಂಡಸರು ಹೆಂಗಸರು ಚೀಲಗಳು ಮತ್ತು ರೈಲು ಚೊಂಬುಗಳ ಸಮೇತ ಗಾಡಿ ಹತ್ತಿದರು.

ಈ ಬೀಗರ ಕಡೆಯ ಇಬ್ಬರು ಮೂರು ಜನ ಧಾಂಡಿಗರು ರೈಲು ಹೊರಡು ತ್ತಲೇ ಒಂದೇ ಸಮನೆ ಏನೇನೋ ಹೊಡದುಕೊಳ್ಳುವುದಕ್ಕೆ ಪ್ರಾರಂಭಿಸಿದರು. ತಾವು ಕೂತಿರುವ ರೈಲನ್ನ ಡ್ರೈವರ್ ಬಿಡುತ್ತಿದಾನೆ ಎಂಬುದನ್ನೂ ಸಹಾ ಮರತು ಅವರು ರೈಲು ಬಿಡುತ್ತಿದ್ದರು! ಮಂತ್ರಿಮಂಡಲದ ಬಿಕ್ಕಟ್ಟು, ಪಾನ ನಿರೋಧದಿಂದಾಗಿರುವ ತೊಂದರೆಗಳು, ಏಕೀಕರಣ ಚಳುವಳಿ, ಕೊರಿಯ, ಕಾಶ್ಮೀರಗಳ ಸಮಸ್ಯೆ, ಇತ್ತೀಚಿನ ಹೋಟಲ್ ದೋಸೆಗಳು—ಇವೇ ಮುಂತಾದ ರಾಷ್ಟ್ರೀಯ, ಅಂತರರಾಷ್ಟ್ರೀಯ ವಿಚಾರಗಳನ್ನ ಅವರು ಚರ್ಚೆಮಾಡುತ್ತ ಬಂದರು! ಅವರಲ್ಲೊಬ್ಬ ಧಾಂಡಿಗ ತನ್ನ ಪ್ರತಿಭೆಯನ್ನ ನನ್ನ ಮುಂದೆ ಪ್ರದರ್ಶಿಸತೊಡಗಿದ! ಎಲ್ಲಾ ವಿಚಾರಗಳೂ ತನಗೆ ಗೊತ್ತಿವೆ ಎನ್ನುವ ಧಾಟಿ ಯಲ್ಲಿ ಮಾತಾಡಿದ. ಆದರೆ ಅವನಿಗೆ ಗೊತ್ತಿಲ್ಲದ ಒಂದು ವಿಚಾರ ನನಗೆ ಗೊತ್ತಿತ್ತು—ಅದು "ಅವನು ಎಷ್ಟು ಸೊಗಸಾಗಿ ಬುರುಡೆ ಹೊಡೆಯಬಲ್ಲ" ಎಂಬುದು!

ಮಂಡ್ಯದ ಸ್ಟೇಷನಲ್ಲಿ ಬೀಗರು ಇಳಿದರು. ಅವರ ಸಾಮಾನುಗಳನ್ನ ಹೊರಗೆ ಹಾಕಲು ನಾವೆಲ್ಲರೂ ಒಟ್ಟಿಗೆ ಐದು ನಿಮಿಷ ಕೆಲಸ ಮಾಡಬೇಕಾಯಿತು! ಇದರಿಂದ ನಮ್ಮ ನಮ್ಮ ಸಾಮಾನುಗಳು ಗಾಡಿಯಲ್ಲೇ ಉಳಿಯಿತು!

ರೈಲು ಶ್ರೀರಂಗಪಟ್ಟಣದ ಸ್ಟೇಷನ್ ಆಚೆ ನಿಂತುಬಿಟ್ಟಿತು. ಎಲ್ಲರೂ ಕೈಮರ ಬೀಳುವುದನ್ನೇ ಕಾಯುತ್ತಿದ್ದರು, ಅದು ಎಷ್ಟು ಹೊತ್ತಾದರೂ ಬೀಳಲೇ ಇಲ್ಲ. ಪ್ರಯಾಣಿಕರಲ್ಲಿ ಕೆಲವರು ಅಂದರೆ ಬಾಗಿಲು, ಕಿಟಕಿಗಳ ಹತ್ತಿರ ನಿಂತಿದ್ದವರು ರೈಲಿನಿಂದ ಇಳಿದು ಅಕ್ಕಪಕ್ಕದಲ್ಲಿ ನಿರಾತಂಕವಾಗಿ, ನಿರ್ಸ್ಯೋಚನೆಯಾಗಿ ಓಡಾಡತೊಡಗಿದರು. ನಾನು ಕಿಟಕಿಯಿಂದಲೇ ಎಲ್ಲವನ್ನೂ ನೋಡುತ್ತಿದ್ದೆ! ಪ್ರಯಾಣಿಕರೊಬ್ಬರು ಅಲ್ಲೇ ನಿಂತಿದ್ದ ಗಾರ್ಡ್ ಬಳಿಗೆ ಹೋಗಿ "ಇಲ್ಲಿ ಒಂದಿಷ್ಟು ಹೂವು ಕಿತ್ತುಕೊಳ್ಳುತ್ತೇನೆ" ಅಂದರು. ಹೂವಿನ ಗಿಡಗಳು ಇಲ್ಲಿ ಎಲ್ಲೂ ಇಲ್ಲ ಎಂದು ಗಾರ್ಡ್ ಹೇಳಿದ್ದಕ್ಕೆ ಅವರು ತಮ್ಮ ಬಳಿ ಹೂವಿನ

ಬೀಜಗಳಿರುವುದಾಗಿ ಉತ್ತರ ಕೊಟ್ಟರು! ಹೀಗೆ ಆ ವಿರಾಮ ಕಾಲದಲ್ಲಿ ನಮ್ಮ ಗಾಡಿಯಲ್ಲೂ ಅನೇಕರು ಹಾಸ್ಯದ ಚಟಾಕಿಗಳನ್ನ ಹಾರಿಸಿದರು.

ಎಷ್ಟೋ ಹೊತ್ತಿನ ಮೇಲೆ ರೈಲು ಮುಂದಕ್ಕೆ ಹೊರಟು ಕೇವಲ ಎರಡು ಗಂಟೆಗಳು ತಡವಾಗಿ ಮೈಸೂರು ಸೇರಿತು. ತಡವಾಗಿ ಬಂದರೂ ನನಗೇನೋ ಮನಸ್ಸು ತುಂಬಿದಹಾಗಿತ್ತು. ಒಂದು ತರಹ ತೃಪ್ತಿ ಆವರಿಸಿತ್ತು.

ಸ್ಟೇಷನ್ನಲ್ಲಿ ಇಳಿದಾಗ ನನಗನ್ನಿಸಿತು—ರೈಲು ಪ್ರಯಾಣ ಬೇಸರವೆನ್ನುವವರು ಶುದ್ಧಮೂರ್ಖರು ಎಂದು. ಅದೂ ಅಲ್ಲದೆ ಈ ಅಭಾವ ಕಾಲದಲ್ಲಿ ಇಷ್ಟೊಂದು ಮನರಂಜನೆ ಒದಗಿಸುವ ರೈಲು ಪ್ರಯಾಣದ ದರವನ್ನ ಮೈಲಿಗೆ ಒಂದು ಕಾಸು ಮಾತ್ರ ಮತ್ತೆ ಹೆಚ್ಚುಮಾಡಿರುವುದು ಏನೇನೂ ಸಾಲದು ಎಂದೂ ನನಗೆ ತೋಚಿತು.

—ಹಾ. ರಾ.






# ಮಾತು ಬಾಣ

"ಈ ಸೀರೆ ಚನ್ನಲ್ಲ ಆಬ್ಲೌಸು
ಸೊಗಸಲ್ಲ"
ಬಿಸಿಯುಸಿರ ಬಿಟ್ಟೆಂತು
ಹುಸಿನುಡಿವ ನಾಟಕಕೆ
ತವರ ಸೀರೆಯೆ ಮದ್ದು
ಅಲ್ಲವೇನೆ ?






ಹೋಟಲೇ ವಾಸಿಯೆಂದರಚುತ್ತ
ಗೊಣಗುತ್ತ
ಸೆಟೆದು ಮನೆಮೊಸರಲ್ಲಿ
ಕಲ್ಲರಸುವಾಟಕ್ಕೆ
ಹೋಟಲೂಟವೆ ಮದ್ದು
ಅಲ್ಲವೇಂದ್ರೆ !

-- **ಸರೋಜಿನಿ ಆರೂರ್.**



# ಬಹಿರಂಗ ಪತ್ರ

---

**ಭಾರತದ ಪ್ರಮುಖ ನ್ಯಾಯಾಧೀಶರಿಗೆ:—**

**ನ್ಯಾಯ ಮೂರ್ತಿಗಳೇ!**

ತಮ್ಮ ಸಾವಿರಾರು ಕೆಲಸದಲ್ಲಿ ಈ ಪತ್ರವನ್ನು ಓದಲು ತಮಗೆ ವಿರಾಮ ವಿದೆಯೋ ಇಲ್ಲವೋ ದೇವರೇ ಬಲ್ಲ! ಈ ಜಾತ್ಯಾತೀತ ದೇಶದಲ್ಲಿ ದೇವರಿದ್ದರೆ! ಆದರೂ ನ್ಯಾಯದ ವಿಚಾರದಲ್ಲಿ ಇಲ್ಲಿ ಮೂಲಭೂತ ವಿಷಯಗಳನ್ನು ವಿಮರ್ಶೆ ಮಾಡುತ್ತಿದ್ದೇನಾದ್ದರಿಂದ—ಅದೂ ಸ್ವಾನುಭವದಿಂದ ಮಾಡುತ್ತಿದ್ದೇನಾದುದರಿಂದ—ತಾವು ಒಮ್ಮೆ ಓದಿದರೆ ನ್ಯಾಯಶಾಸ್ತ್ರಕ್ಕೆ—ಅಂದ ಮೇಲೆ ದೇಶಕ್ಕೇ ಒಳ್ಳೆಯದಾಗುವುದೆಂಬ ಪೂರ್ಣ ಭ್ರಾಂತಿನಿಂದ ನಿಮಗೆ ಬರೆಯುತ್ತಿದ್ದೇನೆ.

ಸ್ವಾಮಿ! ಮೊನ್ನೆಯ ದಿನ ಸ್ನೇಹಿನೊಬ್ಬನ ಜುಲುಮಿನ ಮೇಲೆ ಒಂದು ಬಾಡಿಗೆ ಸೈಕಲ್ ತೆಗೆದುಕೊಂಡು ಮಾವನಹಳ್ಳಿ ಹೋಟಲಿಗೆ ಯಾರೂ ಕಾಣದ ಹಾಗೆ ದೋಸೆ ತಿನ್ನಲು ಹೊರಟೆ. ಕಾಲುದಾರಿಯಲ್ಲಿ ಪೋಲೀಸಿನವ ಒಬ್ಬ ಹಿಡಿದು ನಿಲ್ಲಿಸಿ "ಲೈಸೆನ್ಸ್ ಎಲ್ಲಿ" ಅಂದ. ಬಾಡಿಗೆ ಸೈಕಲ್ಲು ಲೈಸೆನ್ಸ್ ವಿಚಾರ ನಾನರಿಯೆ. ಗಂಟೆಗೆ ಒಂದೂವರೆ ಆಣೆ ಬಾಡಿಗೆ ಅಷ್ಟು ನನಗೊತ್ತು ಅಂದೆ. ಪೋಲೀಸ್ ಠಾಣೆಗೆ ಬಾ ಅಂದ. ನನಗೆ ಪೋಲೀಸ್ ಠಾಣೆಗೆ ಹೋಗುಕ್ಕೆ ಅಂಜಿಕೆ. ನಡು ರಸ್ತೆ ಆದರೆ ಒಬ್ಬ ಪೋಲೀಸ್, ಒಬ್ಬ ನಾನು ನಮ್ಮ ಜಗಳ ನೋಡುಕ್ಕೆ ಒಂದು ನೂರು ಹುಡುಗರು. ಒಂದು ಐವತ್ತು ಗಂಡಸರು ಒಂದಿಬ್ಬರು ಹೆಂಗಸರು ಇಷ್ಟು ಜನವೂ ಗುಂಪುಗೂಡುತ್ತಾರೆ. ನನ್ನ ಪರ ಕೆಲವರು, ಪೋಲೀಸಿನವನ ಪರ ಕೆಲವರು ಹೀಗಾಗಿ ಎರಡು ಪಾರ್ಟಿಯೇ ಇರುತ್ತೆ. ಆದರೆ ಪೋಲೀಸ್ ಠಾಣೆಗೆ ಹೋದರೆ ನಾನೊಬ್ಬನೇ ಒಂದು ಕಡೆ, ನಾಲ್ಕಾರು ಜನ ಪೋಲೀಸಿನವರು ಆ ಕಡೆ. ಜನರಾರೂ ಗುಂಪುಕೂಡದಂತೆ ಪಹರೆ ಕಾಯುತ್ತಾರೆ. ಇದು ನ್ಯಾಯವಾದ ಕದನವಲ್ಲ, ಆದಕ್ಕೇ ಅಂಜಿಕೆ.

ಅಲ್ಲದೇ ನನ್ನ ಹತ್ತಿರ ಇದ್ದಿದ್ದು ಎಂಟೇ ಆಣೆ. ಮಾವನಹಳ್ಳಿ ಹೋಟೇಲಿಗೆ ಕಾಣಿಕೆಯಾಗಿ ಮೀಸಲಾಗಿತ್ತು. ಅದೂ ಅಲ್ಲದೆ ಬೈಸಿಕಲ್ಲಿಗೆ ಲೈಸೆನ್ಸ್

ಇಲ್ಲದಿದ್ದರೆ ಮಾಲೀಕನಿಗೆ ಶಿಕ್ಷೆಯಾಗಬೇಕಾದ್ದು ನ್ಯಾಯ ಅಲ್ಲವೇ, ಈಗ ಹತ್ತಿ ಆಗ ಇಳಿಯುವ ನನಗೇಕೆ ಶಿಕ್ಷೆಯಾಗಬೇಕು?

ಇದೆಲ್ಲಾ ಯೋಚಿಸಿ ಆ ಸೈಕಲ್ಲನ್ನು ಹೇಗೂ ಪೋಲೀಸಿನವನು ಹಿಡಿದು ಕೊಂಡಿದ್ದ. ಅವನ ಕೈಲೇ ಬಿಟ್ಟು "ನೀನೇ ಸೈಕಲ್ ಇಟ್ಟುಕೊಂಡಿರು. ಪೋಲೀಸ್ ಠಾಣೆಗೆ ಮಾಲೀಕನನ್ನು ಕಳಿಸುತ್ತೇನಿ ಎಂದು ಹೇಳಿ ನಾನು ಮಾವನಹಳ್ಳಿ ಸಂದರ್ಶನ ಮುಗಿಸಿ ಬಾಡಿಗೆ ಬೈಸಿಕಲ್ ಮಾಲೀಕನ ಹತ್ತಿರ ನಡೆದು ಹೋಗಿ ನಡೆದ ಸಂಗತಿಯನ್ನು ಹೇಳಿದೆ. ಸತ್ಯಮೇವ ಜಯತೆ ಎಂದು ಸತ್ಯವಾಗಿ ನಡೆದಿದ್ದೆಲ್ಲಾ ಹೇಳಿದೆ.

ಸೈಕಲ್ ಮಾಲೀಕರೇ ಒಂದು ತರಹ ಜನ. ಅವರ ನಾಲಿಗೆ ಬಲು ಚುರುಕು. ಕಂಡಾಪಟ್ಟೆ ನನ್ನ ಮೇಲೆ ರೇಗಿದ. ಪೋಲೀಸಿನವನು ನಿಲ್ಲು ಎಂದು ಕೂಗಿದರೆ ನಾನೇಕೆ ನಿಲ್ಲಬೇಕಾಗಿತ್ತು ಅಂತ ಕೇಳಿದ. "ಸೈಕಲ್ ಸರಪಣಿಗೆ ಚೆನ್ನಾಗಿ ಬೆಣ್ಣೆ ಹಚ್ಚಿದ್ದೆ. ಪೋಲೀಸಿನವನು ನಡೆದುಬರುತ್ತಿದ್ದ. ಜೋರಾಗಿ ತುಳಿದಿದ್ದರೆ ಪೋಲೀಸಿನವ ಎಲ್ಲಿ ಹೇಗೆ ನಿನ್ನ ಹಿಡಿಯುತ್ತಿದ್ದ" ಎಂದು ಕೇಳಿದ. ಇರೋ ಬಾಡಿಗೆ ಬೈಸಿಕಲ್ಲಿಗೆಲ್ಲಾ ಲೈಸೆನ್ಸ್ ತೆಗೆದುಕೊಂಡರೆ ಜೀವನ ನಡೆ ಸೋದು ಹ್ಯಾಗೆ ಈಗಿನ ಕಾಲದಲ್ಲಿ ಎಂದು ಸವಾಲು ಹಾಕಿದ ಕಡೇಗೆ ನೆಟ್ಟಗೆ ಮುರಿಯುತ್ತಾ ಪೋಲೀಸ್ ಠಾಣೆಗೆ ನನ್ನನ್ನು ಕರೆದುಕೊಂಡು ಜಟ್ಕಾದಲ್ಲಿ ಹೊರಟ, ಅಂಗಡಿ ಗಲ್ಲದಲ್ಲಿಟ್ಟಿದ್ದ ಪರ್ಸು ಜೇಬಿನಲ್ಲಿಟ್ಟುಕೊಂಡು.

ಪೋಲೀಸ್ ಠಾಣೆಯಲ್ಲಿ ಇವನ ಬೇಳೆ ಏನೂ ಬೇಯಲಿಲ್ಲ. ಹೋದ ಹೊತ್ತು ವಿಷಘಳಿಗೆ. ಇನ್ಸ್ಪೆಕ್ಟರೇ ಸಾಕ್ಷಾತ್ತಾಗಿ ಇದ್ದರು. ನಮ್ಮಿಬ್ಬರ ಹೆಸರು ವಿಳಾಸ ಬರೆದುಕೊಂಡು ನಾಳೆ ಕೋರ್ಟಿಗೆ ಬನ್ನಿ ಎಂದು ಹೇಳಿದರು.

ಮಾರನೇ ದಿವಸ ಕೋರ್ಟಿಗೆ ಹೋದೆ. ಅದೇ ಮೊದಲು ಸಾರಿ ನಾನು ಕೋರ್ಟು ನೋಡಿದ್ದು. ವರಾಂಡ ಕಂಬದ ಜತೆಗೆ ನಾನೂ ಕಂಭವಾಗಿ ಎರಡು ಗಂಟೆ ನಿಂತಿದ್ದೆ. ಒಬ್ಬ ವಸ್ತಾದಿ ನನ್ನ ಹೆಸರನ್ನು ಕೂಗಿದ. ನಾನು ಒಳಕ್ಕೆ ಹೋದೆ. ಮುಚ್ಚಳ ಇಲ್ಲದ ಪಂಜರದೊಳಗೆ ನನ್ನ ನಿಲ್ಲಿಸಿದರು. ಸಣ್ಣ ಅಟ್ಟದ ಮೇಲೆ ಯಾರೋ ಬರೆಯುತ್ತಾ ಕುಳಿತಿದ್ದರು. ಅಟ್ಟದ ಕೆಳಗಿನ ಭಾಗದಲ್ಲಿ ಒಬ್ಬ ಇನ್ನೇನೋ ಬರೆಯುತ್ತಾ ಕುಳಿತಿದ್ದ. ಈ ಕೆಳಗಿರುವವ ಹೇಳಿದ.

"ಸತ್ಯವಾಗಿ ಹೇಳ್ತೇನೆ" ಅನ್ನಿ ಅಂತ

ಮಹಾಸ್ವಾಮಿ! ನನಗೆ ಈಗ ಸುಮಾರು ನಲವತ್ತು ವಯಸ್ಸು. ನಾನು ಸರ್ಕಾರಿ ಕೆಲಸದಲ್ಲಿ ಇಲ್ಲದೇ ಇರೋದರಿಂದ ನನಗೆ ಒಂದೇ ವಯಸ್ಸು. ಇಷ್ಟು

ದಿವಸಾನೂ ನಾನು ಸತ್ಯ ಎಂದರೇನು? ಇದರ ಬಹಿರೂಪು ಯಾವುದು? ಅಂತ ರ್ರೂಪಾದರೂ ಏನಿರಬಹುದು? ಗಾಂಧೀಜೀಯವರು ಸತ್ಯಾನ್ವೇಷಣ ಹೇಗೆ ಮಾಡಹೋದರು, ಹಿಂದಿನ ಜನಾಂಗದವರು ಹೇಗೆ ಮಾಡುತ್ತಿದ್ದರು, ಪಾಶ್ಚಿಮಾತ್ಯ ದೇಶಗಳಲ್ಲಿನ ವೈಜ್ಞಾನಿಕ ಋಷಿಗಳು ಹೇಗೆ ಈ ಸತ್ಯವನ್ನು ಹುಡುಕುತ್ತಿದ್ದಾರೆ ಇವೆಲ್ಲವನ್ನೂ ನನಗೆ ಸಾಧ್ಯವಾದಷ್ಟು ಮಟ್ಟಿಗೆ ತಿಳಿಯಲು ಯತ್ನಿಸುತ್ತಿದ್ದೇನೆ. ನನಗೆ ಇಷ್ಟೇ ತಿಳಿದುಬಂದಿರುವುದು. ಎಷ್ಟು ಜನರಿದ್ದಾರೆ ಅಷ್ಟು ತರಹ "ಸತ್ಯ"ಗಳು ಈ ಲೋಕದಲ್ಲಿವೆ. ಒಬ್ಬನ ಸತ್ಯ ಇನ್ನೊಬ್ಬನಿಗೆ ಮಿಥ್ಯ. ಹತ್ತಾರು ಜನ ಒಪ್ಪಿದ ಸತ್ಯ ಅವರುಗಳ ಮುಖಂಡ ಹೇಳಿದ ಸತ್ಯ. ಲಕ್ಷ್ಮೀ ತಾಂಡವವಾಡುವಲ್ಲಿ ಸತ್ಯ. ಸರಸ್ವತಿ ಇದ್ದ ಕಡೆ "ಸತ್ಯದ" ವಿಷಯವೆಲ್ಲಾ ಅನುಮಾನ. ಹೀಗಾಗಿ ನನಗೆ ಸತ್ಯವಾಗಿ ಹೇಳು ಎಂದು ಅಷ್ಟು ಸುಲಭವಾಗಿ ಆತ ಅಂದಾಗ—ನಾನು ಕೇಳಲೇಕಾಯ್ತು. ಯಾವ ಸತ್ಯವಾದ ರೀತಿಯಲ್ಲಿ, ನಿಮ್ಮ ಸತ್ಯದ ರೀತಿಯಲ್ಲೇ! ನನ್ನ ಸತ್ಯದ ರೀತಿಯಲ್ಲೇ? ಅಥವಾ ಈ ಸೈಕಲ್ ಮಾಲೀಕನ ಸತ್ಯದ ರೀತಿಯಲ್ಲೇ? ಎಂದು ಹೀಗೆ ಕೇಳಿದ್ದಕ್ಕೆ ಅಟ್ಟದ ಮೇಲೆ ಬರೆಯುತ್ತಾ ಕುಳಿತಿದ್ದನಲ್ಲಾ ಆತನಿಗೆ ಏಕೋ ಕೋಪಬಂತು. "ಏನ್ರಿ ಅಧಿಕ ಪ್ರಸಂಗಿತನ ಮಾಡ್ತೀರಿ? ಕೇಳಿದ್ದಕ್ಕೆ ಸರಿಯಾಗಿ ಜವಾಬು ಕೊಡಿ, ಇಲ್ಲದೆ ಇದ್ದರೆ ನಮ್ಮ ಕೋರ್ಟಿಗೆ ನೀವು ಅಪಮಾನ ಮಾಡಿದ್ದೀರಿ ಅಂತ ಚಾರ್ಜು ಮಾಡುತ್ತೇನೆ ಎಂದರು.

ನನ್ನ ಅನುಮಾನವನ್ನು ಅವರಿಗೆ ವಿಶದೀಕರಿಸಲು ಪ್ರಯತ್ನಿಸಿದೆ. ಅವರು ನನ್ನನ್ನ "ಹತ್ತು ದಿವಸ ಸಜಾ" ಎಂದು ಹೇಳಿ ಜೈಲಿಗೆ ಕಳಿಸಿದ್ದಾರೆ.

ಜೈಲಿನಲ್ಲಿ ನನ್ನ ಬಾಲ್ಯಸ್ನೇಹಿತ ನನ್ನ ರಕ್ಷಕನಾಗಿದ್ದಾನಾದ್ದರಿಂದ ಈ ಕಾಗದ ಬರೆಯಲು ಅನುಕೂಲವಾಯ್ತು. ಜೈಲಿನಿಂದ ಹೊರಗೆ ಬರಲು ಹೀಗೆ ಬರೆದಿದ್ದೇನೆಂದು ತಾವು ತಪ್ಪುತಿಳಿಯಬಾರದು. ಜೈಲು ಬಿಟ್ಟು ಹೊರಗೆ ಹೋಗಲು ನನಗೆ ಸ್ವಲ್ಪವೂ ಇಷ್ಟವಿಲ್ಲ. ತಕ್ಕಮಟ್ಟಿಗೆ ಕೊಠಡಿ ಶುಚಿಯಾಗಿದೆ. ಸೊಳ್ಳೆಕಾಟ ಇಲ್ಲ. ಚೆನ್ನಾಗಿ ಬೆಂದ ಹಿಟ್ಟು ಹುಳಿ ಕೊಡ್ತಾರೆ. ಹೋಟಲಿಗಿಂತ ಎಷ್ಟೋ ಹಿತ. ಇಲ್ಲಿರುವ ಜನರೆಲ್ಲರೂ ಒಬ್ಬರಿಗೊಬ್ಬರು ಮೋಸ ಮಾಡಲೆತ್ನಿಸುವುದಿಲ್ಲ. ಎಲ್ಲರ ಸತ್ಯವೂ ಒಂದೇ, ಇಲ್ಲಿ! ಎನ್ನುವ ಮಟ್ಟಿಗಿದ್ದಾರೆ. ರಕ್ಷಕರು, ವೈದ್ಯರು ಎಲ್ಲರೂ ಬಲು ಒಳ್ಳೆಯವರು ಸಾಯಂಕಾಲ ರೇಡಿಯೋ ಹಾಕಿ ಸ್ವಲ್ಪ ಶಿಕ್ಷೆ ಕೊಡುತ್ತಾರೆ. ಆದರೆ ಅಷ್ಟೂ ಶಿಕ್ಷೆ ಇಲ್ಲದಿದ್ದರೆ ದೇಹ ಕೊಬ್ಬಿ ಹೋಗುತ್ತೆ ಅಲ್ಲವೇ?

ನಾನು ನಿಮಗೆ ಪತ್ರ ಬರೆಯುತ್ತಿರುವುದು ಇದೊಂದೇ ಕಾರಣಕ್ಕೆ—ಅದು "ಸತ್ಯವಾಗಿ ಹೇಳುತ್ತೇನೆ" ಅನ್ನುವುದನ್ನೂ ಮಾರ್ಪಡಿಸಿ—ಕೋರ್ಟಿನ ಸತ್ಯ

ವಾಗಿ ಹೇಳುತ್ತೇನೆ. ಅಥವಾ ಸಾಕ್ಷಿ ಸತ್ಯವಾಗಿ ಹೇಳುತ್ತೇನೆ ಅಥವಾ ವಾದ ಸತ್ಯವಾಗಿ—ಇಲ್ಲಾ ಪ್ರತಿವಾದಿ ಸತ್ಯವಾಗಿ—ಹೀಗೆ ಖರಾರು ವಾಕ್ಯಾಗಿ ವ್ಯಕ್ತ ಪಡಿಸಿ ಅದನ್ನೇ ನ್ಯಾಯ ಶಾಸ್ತ್ರಕ್ಕೆ ಅಂಟಿಸಿದರೆ ಆಗ ಸತ್ಯವಾಗಿ ಮೂಲಭೂತ ವಿಷಯ ಸತ್ಯವಾಗುತ್ತೆ. ಇಂದು ಕೋರ್ಟಿನಲ್ಲಿ ಹೇಳಲ್ಪಡುತ್ತಿರುವುದೆಲ್ಲಾ ಆಗ ಸತ್ಯವಾಗಿಯೂ ಸತ್ಯವಾಗುತ್ತೆ

ಈ ಸಲಹೆ ನಿಮಗೆ ಸರಿತೋರಿದರೆ, ಸಲಹೆ ಸೂಚಿಸಿದ ನನಗೆ ನೀವು ಒಂದು ಉಪಕಾರ ಮಾಡಬಹುದು. ಇನ್ನು ಮೂರು ದಿನಗಳಲ್ಲಿ ನನ್ನನ್ನು ಜೈಲಿನ ಹೊರಗಿನ ಕಠೋರವಾತಾವರಣಕ್ಕೆ ಹೊರದೂಡುತ್ತಾರಂತೆ. ನನಗೂ ಇನ್ನೂ ಹತ್ತು ದಿನ ಜೀವದಾನಮಾಡಿ, ಇಲ್ಲೇ ಸುಖವಾಗಿ ಇರುವಂತೆ ತಾವು ದಯಾ ಮಯರಾಗಿ ಹುಕುಂ ಮಾಡಿದರೆ ನಿಮ್ಮ, ನಿಮ್ಮ ಸಂಸಾರದ ಸುಖಶಾಂತಿಗಳಿ ಗಾಗಿ ನಾನು ದೇವರಲ್ಲಿ ಪ್ರಾರ್ಥಿಸುತ್ತೇನೆ.

ಇತಿ ನಿಮ್ಮ ನ್ಯಾಯ ಸೇವಕ,

ಸತ್ಯಮೂರ್ತಿ.

---

ಉರುಳುರುಳು ಕಲ್ ಜಗವೆ!
ನಿತ್ಯ ನಿರಂತರ ಸೂರ್ಯನ ಮಗುವೆ!
ನನ್ನ ಹೊಟ್ಟೆ ಹಸಿದಿದೆ
ಹಲ್ಲುನೋವು ಬಂದಿದೆ
ನನಗೆ ಬಟ್ಟೆ ತೋರದಿದೆ
ಹುಲ್ಲೆ ವಾಸಿ ಎನಿಸಿದೆ
ಸಾಲ ಶೂಲವಾಗುತಿದೆ
ರೈಲ ದರವು ಏರಿದೆ
ಕೋಪ ಮಿತಿಮೀರಿದೆ
ನಕ್ಕು ವರ್ಷವಾಗುತಿದೆ
ಆದರೇನು
ನೀನುಮಾತ್ರ
ಉರುಳುರಳು, ಕಲ್ ಜಗವೆ
ನಿತ್ಯ ನಿರಂತರ ಸೂರ್ಯನ ಮಗುವೆ!



# ಕಾಲೊನಿ ದಾರಿ



---

– ೧ –

ಕಾದು ನಿಂತೆ ಬಸ್ಸಿಗಾಗಿ
ಬಸವನಗುಡಿ ಸ್ಟ್ಯಾಂಡಲಿ-
ಎಷ್ಟು ಹೊತ್ತು ಕಾದರೂ
ಗಂಟೆಕಾಲ ಸರಿದರೂ
ಕಾಲೋನಿ ಬಸ್ಸು ಕಾಣದು




– ೨ –

ಒರಗಿ ಕಂಬ, ಹುಡುಕಿ ಜೇಬ
ತೆಗೆದು ಹೊರಗೆ ತುಂಡು ಬೀಡಿ.
—ಬಡಗುಮಾಸ್ತೆ, ಹರಿದ ಪೇಟ
ಕೆಂಪು ಪಂಚೆ, ಕೊಳೆಯ ಕೋಟು
ಸೇದಿದೆ ತಿರುಪೆ ಕಾಷ್ಟದಿ·

– ೩ –

ಕಂಬ ಒರಗಿ ನಿಂತತೆ,
ಹೊಗೆಯು ನೆಳೆಯುತಿದ್ದಂತೆ
ಕನಸ ಕಾಣುತಿದ್ದಂತೆ-
ಆರೋ ಎನ್ನ ಕರೆದರು
ಬೆನ್ನ ತಟ್ಟಿ ಕರೆದರು!

– ೪ –

"ಬಾರೋ ಅಣ್ಣಾ, ಕಾರಹತ್ತೊ,
ಬೇಗಬಾರೋ. ಜಲ್ದಿ ಹತ್ತೊ,
ನಿನ್ನ ತಾಣ ನಮಗೆ ಗೊತ್ತು,
ಹೋಗುವ ಕಾಲೋನಿಗೆ ಹತ್ತು"—
ಏನು ಸವಿಯದವರ ದನಿ!




– ೫ –

ಎಚ್ಚೆತ್ತೆ ಕಣ್ಣನುಜ್ಜಿ,
ಕಂಡೆನೇನ—ಕೇಳ್ವಿರಾ ?
ಕಾಕಿ ಧಡಿಯರಿಬ್ಬರು
—ಅತ್ತ ಒಬ್ಬ, ಇತ್ತ ಒಬ್ಬ—,
ಹತ್ತಿರದಲ್ಲೆ ನಿಂತಿತ್ತು
ಬೆಗರ್ಸ್ ಕಾಲೋನಿ ವ್ಯಾನದು !

– ೬ –

ಬಡಗುಮಾಸ್ತೆ, ಹರಿದಪೇಟ,
ಕೆಂಪುಪಂಚೆ ಕೊಳೆಯ ಕೋಟು
ತುಂಡು ಬೀಡಿ, ತಿರುಪೆ ಕಡ್ಡಿ,—
ಆದರಷ್ಟೆ ಬಡಗುಮಾಸ್ತೆ,
ತಿರುಪೆಯವನಾದೆನೆ !
ಅಯ್ಯೊ–ಎಂದು ಚೀರಿ ಬಿದ್ದೆ.

— ಹೆಚ್. ಎಸ್. ಮೂರ್ತಿ.

# ನಿರಾಶ್ರಿತ ನಮ್ಮ ಕ್ಲಬ್ಬು ಕೊಂಡಿದ್ದು

---

ನೋಡುಕ್ಕೇನೋ ತಕ್ಕಮಟ್ಟಿಗಿದ್ದ. ಹೇಳ್ತಾನೂ ಇದ್ದ, ಮೂರು ತಿಂಗಳಿಂದ ಹೊಟ್ಟೆಗೇ ಸಾಲದು ಅಂತ. ಶಿಕಾರಿಪುರದ ಹತ್ತಿರ ಹಿಂದೂಗಳ ಶಿಕಾರಿಯಾದಾಗ ಅಲ್ಲಿಂದ ತಪ್ಪಿಸಿಕೊಂಡು ಬಂದನೆಂತಲೂ ಬೊಂಬಾಯಿ ಪೂನಾ ಬೆಳಗಾಂ ಈ ಮಾರ್ಗ ಸ್ಟೇಷನ್ ಹೆಸರುಗಳನ್ನೆಲ್ಲಾ ಹೇಳಿ ಕಡೆಗೆ ಬೆಂಗಳೂರಿಗೆ ಬಂದು ಬಿದ್ದೆ ಅಂತಲೂ ಹೇಳಿದ. ಯಾವುದಾದರೂ ಕೆಲಸ ಕೊಟ್ಟರೆ ಸಾಕು ಅಂತ ನನ್ನಲ್ಲಿಗೆ ಬಂದಿದ್ದ.

'ನಿಮ್ಮ ಊರಿನಲ್ಲಿ ಏನು ಕೆಲಸಮಾಡ್ತಾ ಇದ್ದೆ' ಎಂದೆ.

'ನಮ್ಮ ಊರಿನಲ್ಲಿದ್ದಾಗ ಕೆಲಸ ಏಕೆ ಮಾಡಬೇಕಾಗಿತ್ತು ನಾನು ?' ಎಂದು ಶುರುಮಾಡಿದ. ಮಗುವಾಗಿದ್ದಾಗ ತೊಟ್ಟಿಲಿಗೆ ಬೆಳ್ಳಿ ಸರಪಣಿಗಳನ್ನು ಕಟ್ಟಿದ್ದರು. ತೊಟ್ಟಿಲ ದೇಹಕ್ಕೆಲ್ಲಾ ಚಿನ್ನದ ತಗಡು ಬಡಾಯಿಸಿದ್ದರು. ರೇಷ್ಮೆ ಬಟ್ಟೆ ಹೊರತು ಬೇರೆ ಬಟ್ಟೆ ಹಾಸುತ್ತಲೇ ಇರಲಿಲ್ಲ. ಒದ್ದೆ ಬಟ್ಟೆ ತೆಗೆಯುವುದಕ್ಕೆ ಒಬ್ಬ ದಾದಿ. ಹೇಸಿಗೆ ಬಟ್ಟೆ ತೆಗೆಯುವುದಕ್ಕೆ ಬೇರೆ ದಾದಿ. ಹೀಗೆ ಸೇವಕರು. ಶಾಲೆಗೆ ಸೇರೋ ವಯಸ್ಸಾದಾಗ ನಮ್ಮ ತಂದೇಗೆ ಯೋಚನೇಗೆ ಇಟ್ಟುಕೊಂಡಿತು. ಹೇಗೆ ಇಂತಹ ಸುಕುಮಾರನನ್ನ ರಸ್ತೇಲಿ ಕಳಿಸೋದು ಅಂತ. ಅದಕ್ಕೇ ನಮ್ಮನೇ ಕಾಂಪೌಂಡಿನಲ್ಲೇ ಒಂದು ಶಾಲೆ ಸ್ಥಾಪಿಸಿದರು. ಅಲ್ಲಿಗೇ ಎಲ್ಲಾ ಹುಡುಗರೂ ಬರೋಹಾಗೆ ಮಾಡಿದರು. ಹೀಗೆ ವಿದ್ಯಾಭ್ಯಾಸ ಆಯಿತು. ಮಾಸ್ತರುಗಳಿಗೆಲ್ಲಾ ನಮ್ಮ ತಂದೆಯೇ ಸಂಬಳ ಕೊಡುತ್ತಿದ್ದರು. ನಾನೂ ಮೊದಲ ಶ್ರೇಣಿಯಲ್ಲಿ ಪ್ಯಾಸುಮಾಡಿದೆ. ಕಾಲೇಜು ವ್ಯಾಸಂಗ ಕಣ್ಣಿಗೆ ಊನ ಅಂತ ನನ್ನನ್ನು ಕಾಲೇಜಿಗೆ ಸೇರಿಸಲೇ ಇಲ್ಲ. ಜೀವನ ಶಾಲೆಯಲ್ಲೇ ಅನುಭವಪಡೆಯುವುದು ಒಳ್ಳೆಯದು ಎಂದು ಅವರ ಲೇವಾದೇವಿ ದುಕಾನಿನಲ್ಲಿ ನನ್ನನ್ನು ಕೆಲಸ ಕಲಿಯಲು ಕರೆದುಕೊಂಡುಹೋದರು.

ಅಲ್ಲೇ ನಾನು ಹಣದ ವ್ಯಾಪಾರ ಕಲಿತಿದ್ದು. ನೌಕರರು ಹೇಳಿದಹಾಗೆ ಸಾಲ ಕೊಟ್ಟು, ಪತ್ರ ಬರೆಸಿ, ರೂಪಾಯಿ ಮರಿಹಾಕುವುದನ್ನು ಕ್ಷಣ ಕ್ಷಣಕ್ಕೂ ನೋಡುತ್ತಿದೆ. ರೂಪಾಯಿಜನನ ನೋಡುವುದಕ್ಕೆ ಬಲು ಚೆನ್ನ. ಹೀಗೆ

ಸುಖಮಯವಾಗಿ ರೂಪಾಯಿಹೆರಿಗೆ ಆಸ್ಪತ್ರೆಯಲ್ಲೇ ಕಾಲಕಳೆದೆ. ಬೇರೆ ಏನೂ ಕೆಲಸ ಕಲಿಯಲು ಅನುಕೂಲವೂ ಇರಲಿಲ್ಲ, ಆವಶ್ಯಕತೆಯೂ ಇರಲಿಲ್ಲ.

ಮನೆಯಲ್ಲಿ ಪುಷ್ಟಿ ಭೋಜನ, ತುಷ್ಟಿ ಮಡದಿ, ಇಷ್ಟದ ಮಕ್ಕಳು ಕಷ್ಟ ಕಾಣದೆ ಕಾಲಹಾಕಿದೆ.

ಆ ವೇಳೆಗೆ ಹಿಂದೂಗಳ ಷಿಕಾರಿ ಶುರುವಾಯ್ತು. ತೊಟ್ಟಿಲು ಮನೆ ಮಠ 'ರೂಪಾಯಿ ಹೆರಿಗೆ' ಆಸ್ಪತ್ರೆ ಎಲ್ಲಾ ಬಿಟ್ಟು, ಬದುಕಿದರೆ ಸಾಕು ಅಂತ ಓಡಿ ಬಂದೆ ಭಾರತಕ್ಕೆ. ಕೈಲೊಂದು ವಜ್ರದ ಉಂಗುರ ಇತ್ತು. ಅದನ್ನು ಬೊಂಬಾಯಿನಲ್ಲಿ ಮಾರುಕ್ಕೆ ಪ್ರಯತ್ನಪಟ್ಟೆ. ಇಷ್ಟು ದೊಡ್ಡ ವಜ್ರದ ಉಂಗುರ ನಾವು ಕೊಂಡು ಏನುಮಾಡೋಣ—ಕೊಳ್ಳುವುದಕ್ಕೆ ಅಷ್ಟು ಹಣವಾದರೂ ಎಲ್ಲಿಂದ ತರೋಣ ಎಂದು ಜವಾಹಿರಿ ಅಂಗಡಿಯವರೆಲ್ಲಾ ತಲೆ ಅಲ್ಲಾಡಿಸಿದರು.

ನನಗೆ ಬೇಜಾರಾಯ್ತು. ಉಂಗುರವನ್ನು ಸಮುದ್ರಕ್ಕೆ ಎಸೆದೆ. ಬೆಂಗಳೂರಿನಲ್ಲಿ ನೀರು ಚೆನ್ನ, ಕುಡಿಯುವುದಕ್ಕೆ ಸಿಹಿ. ಕುಡಿದರೆ ಹೊಟ್ಟೆ ತುಂಬುತ್ತೆ. ಮೈಗೂ ಒಳ್ಳೇದು ಅಂತ ಬೊಂಬಾಯಿನಲ್ಲಿ ಹೇಳಿದರು. ಅದಕ್ಕೇ ಇಲ್ಲಿಗೆ ಮೆಲ್ಲಮೆಲ್ಲಗೆ ಬಂದೆ.

ಮೂರು ತಿಂಗಳಿಂದ ನೀರು ಕುಡಿದೇ ಬದುಕಿದ್ದೇನೆ. ಏನಾದರೂ ಕೆಲಸ ಕೊಡಿ ಮನಸ್ಸಿಟ್ಟು ಮಾಡುತ್ತೇನೆ ಎಂದು ಹೇಳಿದ.

ನಾನು ನಮ್ಮ ಕ್ಲಬ್ಬಿಗೆ ಕಾರ್ಯದರ್ಶಿ. ಕ್ಲಬ್ಬಿನ ಫಲಾಹಾರತಯಾರಕನ ಹಸ್ತಗುಣ ಚೆನ್ನಿಲ್ಲ. ಅವನು ಏನು ತಿಂಡಿ ಮಾಡಿದರೂ ಯಾರೂ ತಿನ್ನಲ್ಲ. ಹೀಗಾಗಿ ಕ್ಲಬ್ಬಿಗೆ ನಷ್ಟವಾಗುತ್ತಿತ್ತು—ಇದ್ದ ಅಡಿಗೆಯವನನ್ನ ಓಡಿಸಿ ಬೇರೊಬ್ಬನನ್ನು ತರೋಣ ಎಂದು ಯೋಚಿಸುತ್ತಿದ್ದೆ. ಆಗಲೇ ಈ ಆಗಂತುಕ ಬಂದಿದ್ದು. ಬಂದು ಹೇಳಿದ್ದು ಅವನ ಕತೆಯನ್ನ.

'ಇಷ್ಟು ಐಶ್ವರ್ಯವಂತನಾಗಿ ಹುಟ್ಟಿ ಬೆಳದೋನು. ಇವನು ಯಾವ ಜವಾಬ್ದಾರೀ ಕೆಲಸಕ್ಕೂ ನಾಲಾಯಕ್ಕು. ಅಂತಹದರಲ್ಲಿ ಬಲು ಚೂಟಿ ಇರಬೇಕಾದ ನಳಪಾಕ ಕೆಲಸಕ್ಕೆ ಇವನನ್ನು ಹೇಗೆ ನೇಮಿಸೋದು ಎಂದು ಅನುಮಾನ. ಆದರೂ ಈಗಿರುವ ಅಡಿಗೆಯವನಿಗಿಂತ ಯಾರಾದರೂ ವಾಶಿ ಎನ್ನುವ ಧೈರ್ಯ. ಕೇಳೇ ಬಿಡೋದು ಅಡಿಗೆ ಕೆಲಸಕ್ಕೆ ಬರ್ತೀಯಾ ಅಂತ. ಅವನು ಮಾನ ಮರ್ಯಾದೆ ಬಿಟ್ಟು ಹೊಟ್ಟೇ ಪಾಡಿಗೋಸ್ಕರ ಆಗಲಿ ಎಂದರೆ ನಾನೂ ಹ್ಞೂ ಅನ್ನೋದು ಅಂತ ಯೋಚಿಸಿ ಅವನಿಗೆ ಈ ಸಲಹೆ ಕೊಟ್ಟೆ.

ಒಂದು ಕ್ಷಣವೂ ಯೋಚಿಸದೆ ಆತ ಹ್ಞೂ ಅಂದ. ಆನಂದಬಾಷ್ಪ ಕಣ್ಣಲ್ಲಿ ಕಂಡಿತು. ನನ್ನನ್ನು ತಬ್ಬಿಕೊಳ್ಳೋದು ಒಂದೇ ಬಾಕಿ ಅಷ್ಟು ಹಿಗ್ಗಿ ಹೀರೆಕಾಯಾದ.

ಮರುದಿವಸದಿಂದ ಅವನೇ ಕ್ಲಬ್ಬಿನ ಅಡಿಗೇ ಮನೆಯಲ್ಲಿ. ಸಾಕ್ಷಾತ್ ನಲಲ. ಸಾಯಂಕಾಲ ೨-೪ ಗಂಟೆಗೇ ಆ ಅಡಿಗೆ ಮನೆಯಿಂದ ಕ್ಲಬ್ಬಿನ ಕೊಠಡಿ ಕೊಠಡಿಗೂ ಒಂದು ರೀತಿಯಾದ ಸುಘಮ ಘಮ ಸೂಸಲು ಆರಂಭಿಸಿತು. ದಿನಕ್ಕೆ ಸಾಮಾನ್ಯ ೨೦ ಜನ ಕ್ಲಬ್ಬಿಗೆ ಬರುತ್ತಿದ್ದರು. ೩ ರೂಪಾಯಿ ತಿಂಡಿ ವ್ಯಾಪಾರ ಆಗುತ್ತಿತ್ತು. ಕೇವಲ ಒಂದೇ ತಿಂಗಳಲ್ಲಿ ದಿನಕ್ಕೆ ೩೦೦ ಜನ ಬರಲಾರಂಭಿಸಿದರು. ದಿನಕ್ಕೆ ೩೦೦ ರೂಪಾಯಿ ವ್ಯಾಪಾರ ಆಗ ಹತ್ತಿತು.

ಸಕ್ಕರೆ ಗೋಧಿ ರವೆ ತುಪ್ಪ, ಬಾದಾಮಿ, ಪಿಸ್ತಾ, ಬೆಲ್ಲ. ಇಷ್ಟೇ ನೋಡಿ ಇವನ ಸಾಮಗ್ರಿಗಳು. ಅದರಲ್ಲಿ ಕಲಾಕೃತಿಗಳನ್ನು ಮಾಡುತ್ತಿದ್ದ, ನೋಡಿ ಸುಮಾರು ೩೦೦ ವಿಧ—ನೋಡುಕ್ಕೆ—ರುಚಿ ಮುನ್ನೂರು—ಹೆಸರುಗಳು ಮುನ್ನೂರು.

ಕ್ಲಬ್ಬಿನ ಮೆಂಬರುಗಳೆಲ್ಲಾ ಮೊದಮೊದಲು ಸಂಸಾರ ಸಮೇತ ಬರುತ್ತಿದ್ದವರು ಕಡೆಕಡೆಗೆ ಒಬ್ಬೊಬ್ಬರೇ ಬರುತ್ತಿದ್ದರು—ಸಂಸಾರವೆಲ್ಲಾ ತಿಂದರೆ ಅಷ್ಟು ಹಣ ಕೊಡಲು ಸಂಪಾದನೆ ಸಾಲದು ಎಂದು ಅವರ ಸಬೂಬು—

* * *

ಕ್ಲಬ್ಬಿನ ವಾರ್ಷಿಕ ಸಭೆ. ಸದಸ್ಯರೆಲ್ಲಾ ಕೇಳಿದರು ಈ ನಳನನ್ನು ಎಲ್ಲಿ ಕಂಡುಹಿಡಿದೆ. ಏನು ಸಂಬಳ ಅಂತ. ಹೀಗೆ ಹೀಗೆ ಅಂತ ಹೇಳಿ, ಸಂಬಳ ನಿಗದಿ ಮಾಡಲಿಲ್ಲ. ೮ ಆಣೆ ನಫೆ ಅವನದು ೮ ಆಣೆ ನಫೆ ಕ್ಲಬ್ಬಿಗೆ ಅಂತ ನಿಖರಮಾಡಿದ್ದೆ. ಆಗ್ಗೆ ದಿನಕ್ಕೆ ೩ ರೂಪಾಯಿ ವ್ಯಾಪಾರ ಆಗ್ತಿತ್ತು. ೧-೮-೦ ಲಾಭ ಒರುತ್ತಿತ್ತು ಅಂದರೆ ಅವನಿಗೆ ಸುಮಾರು ೨೫ ರೂಪಾಯಿ ಪಗಾರ ಅಂತ ಲೆಕ್ಕಮಾಡಿ ಒಪ್ಪಿದೆ.

ಈಗ ಲೆಕ್ಕ ನೋಡಿದರೆ ಈ ವರ್ಷ ಅವನಿಗೆ ಮೂವತ್ತಾರು ಸಾವಿರ ರೂಪಾಯಿ ನಿವ್ವಳ ಸಂಪಾದನೆ ಆಗಿರಬೇಕು. ಕ್ಲಬ್ಬಿಗೆ ಮೂವತ್ತಾರು ಸಾವಿರ ರೂಪಾಯಿ ನಿವ್ವಳ ಲಾಭ ಬಂದಿರಬೇಕು. ಎಲ್ಲವು ಲೆಕ್ಕದಲ್ಲಿದೆ ಸದಸ್ಯರ ಸಾಲ ಈಗ ಮೊತ್ತ ೭೨,೦೦೦ಕ್ಕೆ ಏರಿದೆ.

ನೀವೆಲ್ಲಾ ನಿಮ್ಮ ನಿಮ್ಮ ಬಾಕೀನ ಕೊಡದೇ ಇದ್ದರೆ ಅವನು ಕೋರ್ಟಿನಲ್ಲಿ ಕ್ರಮ ಕೈಗೊಳ್ಳುತ್ತೇನೆ ಅಂತ ಹೆದರಿಸುತ್ತಿದಾನೆ. ಎಂದು ಕಾರ್ಯದರ್ಶಿಯ ವರದಿ ಒಪ್ಪಿಸಿದೆ.

ಸದಸ್ಯರೆಲ್ಲರೂ ಸುಸ್ತು. ಚೆನ್ನಾಗಿ ತಿಂದಿದ್ದರು. ಅದನ್ನು ಅಲ್ಲಾ! ಆಗರ್ಭ ಶ್ರೀಮಂತ ಅಂತ ಹೇಳಿದೋನು ಇಷ್ಟು [illegible] ಅಡಿಗೆ ಮಾಡಜೇಕಾದರೆ—ಅವನು ನಳ ಗೋತ್ರದವನೇ ಆಗಿರಬೇಕು. ಆ[illegible] ಈಗೇನು ಮಾಡೋದು ಎಂದು ಯೋಚಿಸಿ ಕಡೆಗೆ ವಾರ್ಷಿಕ ಸಭೆಗೆ ಅವನನ್ನು ಅಡಿಗೆ ಮನೆಯಿಂದ ಕರೆಸಿದರು.

ಒಬ್ಬ ಚೂಟಿ ಸದಸ್ಯ ಅವನಿಗೆ ಹೇಳಿದ. 'ಇನ್ನುಮೇಲೆ ನೀನು ಈ ಕ್ಲಬ್ಬಿನ ಅಧ್ಯಕ್ಷನಾಗು ಕ್ಲಬ್ಬಿನ ಆಗು ಹೋಗುಗಳನ್ನು ನೀನೇ ನೋಡಿಕೋ. ಸಾಲ ಹೆಚ್ಚದಂತೆ ಕಾಪಾಡಿಕೋ ಹೋದ ವರ್ಷದ ಬಾಕಿಯಲ್ಲಿ ಆದಷ್ಟು, ಆದಾದಾಗ ನೀನೇ ಸದಸ್ಯರಿಂದ ಕಸಿದುಕೋ ಎಂದು.

ಈಗ ನಮ್ಮ ಕ್ಲಬ್ಬಿಗೆ ಅವನೇ ಅಧ್ಯಕ್ಷ.

---

ನನ್ನದಿದೇ ಹಿರಿಯ ಆಸೆ!
ಮುನ್ನ, ತಾತ ಮುತ್ತಾತ
ರಿದ್ದಂತೆ ಇರಲು ಆಸೆ!
ಅಂದ್ರೆ ನಾನು ಹುಟ್ಟುವ ಮೊದಲೇ
ತಾತನ ಸಂಗಡ ಹುಟ್ಟಿರಬೇಕು.

* * *

ಕೈ ಹಿಡಿದವಳು ಕೈಯಕೊಟ್ಟು
ಕೈ ಮಾಡುವುದಕ್ಕಿಂತಲೂ
ಕೈ ಹಿಡಿದವಳ ಕೈಯಕೊಡವಿ
ಕೈ ಬಿಡುವುದೆ ಒಳ್ಳಿತು.



# ರೇಷನ್ ವಿಜಯ



(ಗೀತಾ ನಾಟಕ)

(ದೊಡ್ಡವರ ಕ್ಷಮೆಬೇಡಿ)

ಪಾತ್ರಗಳು:—೧. ಸಿದ್ದ—ಜವಾನ, ೨. ವೆಂಟಕರಮಣಯ್ಯ—ರೇಷನ್ ಆಫೀಸರ್, ರಾಮಯ್ಯ—ಹೋಟೆಲ್ ಮಾಲೀಕ.

**ಸಿದ್ದ** :—(ಮುನ್ನುಗ್ಗುತ್ತಿರುವ ರಾಮಯ್ಯನನ್ನು ಈಚೆಗೆಳೆದು)

ರಾಗ: ಸುರುಟಿ

ಯಾರಯಾ, ನೀ, ಪೇಳಯಾ
ಸುಮ್ಮನೆ ಮುನ್ನುಗ್ಗುವಿಯಾ ॥ ಪ ॥
ಸಲ್ಲಿಸದೇ ಕಾಟ್ಳೇ
ಕಾಲಿಟ್ಟರೇ ಮುಂದೆ ॥
ಕುತ್ತಿಗ್ಗೆ ಕೈ ಹಾಕಿ
ನೂಕಿಬಿಡುವೆ, ನಾನು ॥

**ರಾಮಯ್ಯ** :—(ಕೋಪಗೊಂಡ ಸಿದ್ದನ ಕೈಯನ್ನು ಬೆಚ್ಚಗೆ ಮಾಡುತ್ತಾ)

ರಾಗ : ಕಾನಡಾ

ಯಾರಾದರೇನೊ, ಕೊಳ್ಳೊ ॥ ಪ ॥
ಬಾಗೀಲ ತೆರೆಯಿಸಿ ತೂರ್ಸೋ ॥
ಒಳಗಾಡೆ ನುಗ್ಗಿಸಿ ಕೂರ್ಸೋ ॥
ನಿಮ್ಮಾಫಿಸ್ರ ನಗುಮುಖವಾತೋರ್ಸೋ ॥
(ಹೀಗೆಂದು ಒಳನುಗ್ಗುವನು)

**ರಾಮಯ್ಯ**:—(ಆಫೀಸರನ್ನು ಸಂಭೋದಿಸಿ)

ರಾಗ : ಅಠಾಣಾ

ಲಾಲಿಸು, ರಮಾಣನೇ
ಪೇಳ್ವೆನು, ನಾ ॥ ಪ ॥

ಎಮ್ಮೆಯು ಹೊಟ್ಟೆಗೆ
ಬರುತಿಹ 'ಕುರೀ'ಗಳು ||
ಸುಮ್ಮನೆ ಕೂರದೆ
ದೋಸೆಯ ಕೇಳ್ವರು ||

**ವೆಂಕಟರಮಣಯ್ಯ** :—(ಸಿಟ್ಟನಿಂದ, ಸೀಟನಿಂದೆದ್ದು)

ರಾಗ : ಕೇದಾರಗೌಳ

ಪೋಗು, ಪೋಗೆಲೋ,
ಮಾಣಿಯೋ || ಪ ||
ಸ್ಟಾಕಿಲ್ಲದಿರೂವಾಗ
ಬೇಕೆನ್ನುವರೇನೋ ||
ಸ್ಟಾಕೂ ಬಂದಾಮೇಲೆ
ನೋಡೋಣ, ನಡಿಯೋ ||

**ರಾಮಯ್ಯ** :—(ಆಫೀಸ್ರಕಾಲನ್ನು ಬಿಗಿಯುತ್ತಾ)

ರಾಗ : ನಾದನಾಮಕ್ರಿಯೆ

ಬಿಡುವೆನೇನಯ್ಯಾ ರಮಣ । ನಿನ್ನ ಬಿಡುವೆನೇನಯ್ಯಾ
ನಾ ಸುಮ್ಮನೇನಿನ್ನಾ । ಬಿಡೂವೆನೇನಯ್ಯಾ || ಪ ||
ಬಿಡುವನೇನೊ ರಮಣ ನಿನ್ನ । ಅಡಿಗಳಿಗೆ ಶಿರವಕಟ್ಟಿ
ಫುಡ್ ಅಸಿಸ್ಟೆಂಟಲಿ ಎನ್ನ । ನಾಮವ ನಿಲ್ಲಿಸೋತನಕಾ ||
ಹಸ್ತವನೆತ್ತಿದರೇನು । ಹಲ್ಲು ಮುಡಿಯ ಕಚ್ಚಿದರೇನು
ಕಿಂಕಾರಾ ನಿನ್ನವನು ನಾನು । ಸಲಹೈಯ್ಯಾ, ರಮಣಾ ||

**ವೆಂಕಟರಮಣಯ್ಯ** :—(ಕಾಲನ್ನು ಬಿಡಿಸಿಕೊಳ್ಳಲು ಯತ್ನಿಸುತ್ತಾ)

ರಾಗ : ಮೋಹನ

ಬಿಡೋ ನನ್ನ ಪಾದವ । ಬಿಗಿಯುವಿಯೇಕೋ
ಕೊಡೋ ನನ್ನ ಕಾಣಿಕೆ । ಕಾಡಿಸುವಿಯೇಕೋ || ಪ ||
ಕೊಂಚ ಕೊಟ್ಟರೆ ಕೊಡೆ । ಫೇಡಕೊಟ್ಟರೂ ಕೊಡೆ
ಘೋರ ರೂಪವ ತಾಳೀ । ಹೊಡದೋಡಿಸುವೆ ||
ಅಚ್ಚು ಮೆಚ್ಚಾಗಿ ನಿಂದು । ಕೈಲಿ ಕಾಸಿಲ್ಲೆಂದರೆ
ಒಡನೆ 'ಪ್ಲೀಮತ್ತಾ' ನೇರೀ । ಓಡಿಬಿಡುವೆನಾನು ||

(ಹೀಗೆ ಹೇಳುತ್ತಿರುವಾಗ, ರಾಮಯ್ಯನು ಆಫೀಸರ ಕಿಸೆಯಲ್ಲಿ ನೋಟಿನ ಕಂತೆ ತುರುಕುವನು. ಆಫೀಸರು ಪರ್ಮಿಟ್ಟು ಕೊಡುವನು.

**ರಾಮಯ್ಯ :**—(ಹಿಗ್ಗುತ್ತಾ)

ರಾಗ: ಬೇಹಾಗ್

ಕಂಡು ಧನ್ಯನಾದೆನಾ । ವೆಂಕಟರಮಣನಾ
ಕಣ್ಣಾರ ಕಂಡು ಧನ್ಯನಾದೆ । ನಾವೆಂಕಟರಮಣನಾ ॥ ಪ ॥
ಉಗ್ರಾಣದೊಡೆಯನಾ । ಧನಧಾನ್ಯಪಾಲನಾ
ಕೂಶ್ಮಾಂಡ ಮೂರ್ತಿಯಾ । ನಮ್ಮಿಷ್ಟದಾತನಾ ॥

(ತೆರೆಯು ಬೀಳುವುದು.) —ಚಾ. ವೆ.



ಬೇವಿನ ಸೊಪ್ಪು ಹಿಡಿದುಕೊಂಡು ಹೊರಟಿದ್ದಾರೆ:—

—ಇನ್ನುಮೇಲೆ ಬೇವಿನ ಸೊಪ್ಪನ್ನೇ ಮೇಯಿಸುತ್ತಾರೋ ಏನೋ!!

# ವಾಲ್ಮೀಕಿಯ ವ್ರೊದ್ದಾಟ

★ ಹಾದಿಕವಿ ★

ಇದು 'ವೈದ್ಯನ ವ್ಯಾಧಿ' ಅಲ್ಲ. ಇದು 'ಕೈಲಾಸಂ ಕಾಯಿಲೆ' ಅಲ್ಲ. ಇದು ನಿಜವಾಗಿಯೂ ಒದ್ದಾಟ ವ್ರೊದ್ದಾಟವಾದದ್ದೇ, ಕತೆ.

ನಾನು ಮನೇ ಕಟ್ಸೋಕೆ ಅಂತ ಆ ಸುಡುಗಾಡು ಸೈಟು ತೊಕೊಂಡೆನಲ್ಲಾ—ಆಗ ಅದರ ಸುತ್ತಾ ಮುತ್ತಾ ಆಳಾಳೆತ್ತರ ಹುತ್ತಗಳಿದ್ವು. ಹಾವುಗಳಿದ್ವೋ ಇಲ್ವೋ ನಾ ಕಾಣೆ. ಮನೆ ಕಟ್ಟಿದ ಶಾಸ್ತ್ರಮಾಡಿ, ಅದು ಮುಗಿಯೋಕೆ ಮುಂಚೇನೇ ನಾವು ಗೃಹಪ್ರವೇಶಮಾಡಿಕೊಂಡ ಮೇಲೆ— ನಮ್ಮ ಮನೆ ಹುಡುಗರು ಸುಮ್ಮನೆ ಇರಕಾರೆಯೇ—ಆ ಮನೆಗೆ ಒಂದು ಹೆಸರು ಇಡಬೇಕು ಅಂತ—ಅದು ಯಾವ ಮನೆಹಾಳ ಶಾಸ್ತ್ರೀನ ಸಲಹೆ ಕೇಳಿದರೊ ಕಾಣೆ—ಹೆಸರಿಟ್ಟರು ನಂ. ಮನೇಗೆ—'ವಲ್ಮೀಕ ವ್ಯೂ' ಅಂತ. ಅಂದ್ರೆ, ಕಣ್ಬಿಟ್ಟಾಗಲೆಲ್ಲ ಹುತ್ತ ಕಾಣಿಸಿಕೊಳ್ಳುತ್ತೆ ಅಂತ. ಅದೇನೋ ಸರಿಯೇ ಆದರೂ, ಮನೇ ಮುಂದಿನ ಗೋಡೇ ಮೇಲೆ ಹಾಗಂತ ಹೆಸರು ಬರಿಯೋವಾಗ—ಅದೇನು ಅವರ ತೋಳು ಸೋತಿತೋ, ಅಥವಾ ತಂದಿದ್ದ ಇದ್ದಿಲು ಚೂರು ತೀರಿಹೋಯಿತೋ, ಇಲ್ಲವೆ ಆ ಮರ್ಕಟ ಬುದ್ಧಿ ಇನ್ನು ಯಾವುದಕ್ಕೆ ಅಷ್ಟರಲ್ಲೇ ಹಾರಿತೋ—ಅಂತೂ 'ವಲ್ಮೀಕ' ಅಂತ ಅಷ್ಟೇ ಬರದು ನಿಲ್ಲಿಸಿಬಿಟ್ರು. ಅದನ್ನ ಅವರು ಬಿಟ್ಟಹಾಗೇನೇ ನಮ್ಮ ಆಕೇನೂ ಅಲ್ಲಿಗೇ ಬಿಟ್ಟದಿದ್ರೆ ಚೆನ್ನಾಗಿರ್ತಿತ್ತು. ಆದರೆ ಆಕೆ ಹಾಗೆಲ್ಲಾ ಬಿಡೋ ಜಾತಿ ಅಲ್ಲ.

ನಾನು ಹೊಟ್ಟೆಪಾಡಿಗೆ ಏನೋ ಅವರಿವರು ಮಾಡು ಅಂದದ್ದನ್ನ ಮಾಡತಾ ಇದ್ದರೂ, ನನ್ನ ಪಾಡಿಗೆ ನನಗೇನುಬೇಕೋ ಅದನ್ನ ರಾಮ ಕೃಷ್ಣ ಅಂದುಕೊಂಡು ಮಾಡಿಕೋತಿರತೇನೆ. ಅಂದ್ರೆ, ಇವೊತ್ತಿನ ಅನೇಕರ ಹಾಗೆ, ನಾನೂ ಒಬ್ಬ ಬರಹಗಾರ. ನಾನು ಪ್ರಸಿದ್ಧನಲ್ಲದೆ ಇರಬಹುದು, ನನ್ನದು ಅಮರ ಕಲಾಕೃತಿ ಅಲ್ಲದಿರಬಹುದು, ನಾನು ಒರೆದದ್ದು ಪೈಲಿಕಲ್ಲು ಆಗದೆ ಇರಬಹುದು; ಆದರೂ ನಾನೇನೂ ಹಾಗಂತ ಯಾವತ್ತೂ ಮುನ್ನುಡೀಲಿ ಹೇಳಿಕೊಂಡಿಲ್ಲ. ಇತರರಿಗೆ ಕಾಫಿ ಸಿಗರೇಟು ಕೊಟ್ಟು ಹೇಳಿಸಿಕೊಂಡಿಲ್ಲ. ಇಂಥ

ಹಸು ಸಾಧುವಾದ ಪ್ರಾಣಿಯನ್ನ, ಮುಂದೆ ಬಂದರೆ ಹಾಯಬೇಡಿ ಹಿಂದೆ ಬಂದರೆ ಒದೆಯಬೇಡಿ ಅಂತ ಬಂದು ಬಳಸಿ ಅಡ್ಡಗಟ್ಟಿ ಬದುಕತಾ ಇರೋ ನನ್ನ, ನನ್ನ ಹೆಂಡತಿ, ನನ್ನ ಮಕ್ಕಳು ಬುದ್ಧಿಯಿಲ್ಲದೆ ಮನೆಗೆ 'ವಲ್ಮೀಕ' ಅಂತ ಹೆಸರಿಟ್ಟರೆ, ಮನೆಗೆ ಯಜಮಾನ ನನಗೆ 'ವಾಲ್ಮೀಕಿ' ಅಂತ ಹೆಸರಿಡಬಹುದೆ ಅಂತೀನಿ? ಹೀಗೆ ಕರೆಸಿಕೊಳ್ಳೋದು ಒದ್ದಾಟ ಅಲ್ದೆ ಹೋದ್ರೆ, ಇನ್ಯಾವದು ಅಂತೀನಿ?

ಆದ್ರೆ, ಈ ಒದ್ದಾಟ ಹೇಳೋಕಲ್ಲ ಹೊರಟದ್ದು ನಾನು; ಆ 'ಪೊದ್ದಾಟ' ಅಂದೆನಲ್ಲಾ, ಅದನ್ನ.

ಒಂದು ದಿನ ಯಥಾಪ್ರಕಾರ, ಕಿರಿಕತಾ ಇದ್ದೆ. ಬಂತು ಅಮ್ಮಾವ್ರ ಸವಾರಿ.

"ಏನು ವಾಲ್ಮೀಕಿಗಳೇ! ಇವತ್ತೇನು ನಿಮ್ಮ ರಾಮಾಯಣ?"

"ಶ್! ಆಚೆ ಹೋಗು, ಶೂರ್ಪನಖಿ."

"ಹೋಗ್ತೀನಿ. ಅಡಿಗೆ ಏನುಮಾಡಲಿ ಅಂತ ಕೇಳೋಕೆ ಬಂದೆ."

"ನಿಂಗೆ ಖುಷಿ ಬಂದದ್ದು ಮಾಡು"

"ಬೆಂಡೆಕಾಯಿ ಗೊಜ್ಜು ಮಾಡಲೆ ಅಂದ್ರೆ?"

"ವೆರಿ ಗುಡ್. ಮಾಡು."

"ಬೆಲ್ಲ ಮುಗಿದುಹೋಗಿದೆಯಲ್ಲ."

"ಹಾಗಿದ್ರೆ, ಸಣ್ಣಗೆ ಪಲ್ಯ ಮಾಡಿಬಿಡು"

"ಪಲ್ಯ ಮಾಡಿದ್ರೆ ಎಲ್ಲರಿಗೂ ಸಾಕಾಗುತ್ಯೆ?"

"ಸರಿ, ಹಾಗಾದ್ರೆ, ನೀರಾಗಿ ಹುಳಿ ಮಾಡಿಬಿಡು."

"ಥೂ! ಇದೇನು ದಿನಾನೂ, ನಿನ್ನೆ ತಾನೆ ಹುಳಿತಿನ್ಲಿಲ್ವೆ?"

"ಸರಿ, ನಿಂಗೆ ಏನುಬೇಕೋ ಅದನ್ನ ಮಾಡಿಬಿಡು, ಮಹರಾಯಿತಿ."

"ಬೇಡ, ಅಂದ್ರೆ. ಈರುಳ್ಳೀದು ಹುರಿದ ಪಲ್ಯ ಮಾಡಿಬಿಡಲೆ?"

"ಮಾಡು."

"ನಿಜವಾಗಿ, ಹುರಿಯೋ ಬಾಣಲೆ ತೂತಲ್ಲಾ ಅಂದ್ರೆ."

"ಮಹಾತಾಯಿ, ನೀನೇನಾರೂ ಮಾಡಿ ಬಡಿಸು. ನಂದೇನು ಅಭ್ಯಂತರವಿಲ್ಲ."

"ಡಾಕ್ಟರ್ ಹುರಿದದ್ದು ಕರಿದದ್ದು ತಿನ್ನಬೇಡಿ ಅಂದಹಾಗಿತ್ತಲ್ಲಾ ನಿಮಗೆ."

"ಅಂದ್ಹಾಗಿತ್ತು. ಹುರೀದೆ ಕರೀದೆ ಏನಾದರೂ ಮಾಡು."

"ಅದು ಯಾವುದೂ ಬೇಡ. ತೆಪ್ಪಗೆ ಚಟ್ನಿ ಅರೆದುಬಿಡತೀನಿ. ಸಾಕಲ್ಲಾ?"

"ಸಾಕು. ಮೊದಲು ಹೋಗಿ ಅರೆ. ನನ್ನ ಮಾತ್ರ ಸುಮ್ಮನೆ ಅರೀಬೇಡ."

"ಯಾವ ಚಟ್ನಿ ಅರೀಲಿ?"

"ಯಾವದಾದರೂ."

"ಯಾವದಾದರೂ ಅಂದ್ರೆ? ಕೊತ್ತುಂಬರಿ ಚಟ್ನಿ?"

"ಹುಂ"

"ಹುಂ ಅನ್ನೋಕೇನು ನಿಮ್ಗೆ? ಸದ್ಯ ಮೆಣಸಿನ ಪುಡಿಗೆ ಕೊತ್ತುಂಬರಿ ಸಿಕಿದರೆ ಸಾಕಾಗಿದೆ. ಪುದೀನಾ ಮಾಡಿಬಿಡತೀನಿ ಅಂದ್ರೆ, ನೆಂಜಿಕೊಳ್ಳೋಕೆ."

"ಒಳ್ಳೇದು, ಹಾಗೇ ಮಾಡು."

"ಪುದಿನಾ ನಿಮಗೆ ವ್ಯೈಗಾಗುತ್ಯೆ? ಉಷ್ಣ ಅಂತಾರೆ."

"ನೋಡು· ನನಗೆ ಕೆಲಸ ಇದೆ. ಹೊತ್ತಾಯ್ತು·"

"ಮತ್ತೆ, ಬೇಗ ಹೇಳಿ. ಸರಿ, ಯಾವ್ದೂ ಬೇಡ. ಬದನೆಕಾಯಿ ಎಣ್ಗಾಯಿ ಮಾಡತೀನಿ."

"ಹುಂ. ಮಾಡು ಎಣ್ಗಾಯಿ ತಿಂದು ತುಂಬ ದಿನಾ ಆಗಿತ್ತು."

"ಅಂದ ಹಾಗೆ. ಇವತ್ತು ಏಕಾದಶಿಯಂತೆ. ಬದನೆಕಾಯಿ ಮಾಡ ಬಹುದೆ?"

"ನೋಡು, ಮರಿ. ಹೇಗೂ ಏಕಾದಶಿ. ತಣ್ಣಗೆ ಉಪವಾಸ ಮಾಡಿ ಬಿಡೋಣ, ಬಿಡು."

"ನಿಮಗೆ ಹ್ಯಾಗೂ ಆಗಬಹುದು. ವಾಲ್ಮೀಕಿಗಳಲ್ಲವೆ? ನಿಮಗೆ ವಾಯು ಭಕ್ಷಣ ಸಾಕು. ನಮಗೆ?"

"ನೋಡು. ನೀನು, ನಿನ್ನ ಮಕ್ಕಳು ಎಲ್ಲಾ ಸರ್ವ ಭಕ್ಷಣಮಾಡಿ. ಸರಿಯಾ?"

"ಏನು ಸರ್ವಭಕ್ಷಣ ಮಾಡೋದು? ಬೆಂಡೇಕಾಯಿ ಬಲಿತುಹೋಗಿದೆ, ಈರುಳ್ಳಿ ಇಲಿ ಕಚ್ಚಿಹಾಕಿದೆ. ತೆಂಗಿನಕಾಯಿ ಮುಗ್ಗಲು. ಪುದೀನಾ ಪಾರ್ವ ತಮ್ಮನೋರ ಹಿತ್ತಿಲಿಂದ ತರಬೇಕು. ಬೇಳೆ ಮುಗಿದು ಮೂರು ದಿವಸ ಆಯ್ತು. ಬೆಲ್ಲ ಇಲ್ಲದೆ ಇಷ್ಟು ಗೊಡ್ಡಸಾರು ಕಾಸ್ತೀನಿ, ಹೋಗಿ."

ಈ ಭಾಗ್ಯಕ್ಕೆ ಇಷ್ಟು ಚರ್ಚೇನಾ? ಯಾರಿಗೆ ಹೇಳಿಕೊಳ್ಳೋದು? ಬಿಟ್ಟ ಬಾಯಿ ಬಿಟ್ಟಹಾಗೆ ನೋಡಿದೆ. ಯಾರಮೇಲೆ ರೇಗೋದು? ನನ್ನ ತುಟಿ ನಾನೇ ಕಡಿದುಕೊಂಡೆ. ಆಗ ನನಗೆ ನನ್ನ ಸ್ಥಿತಿ ವೇದ್ಯವಾಯಿತು : ಇದು ವಾಲ್ಮೀಕಿಯ ಒದ್ದಾಟವಲ್ಲ, ಇದು ವಾಲ್ಮೀಕಿಯ ವೊದ್ದಾಟ, ಅಂತ. ಅನು ಭವಿಸುತ್ತಿದ್ದೇನೆ.





# ಇಸ್ಕೂಲು ಇನ್ಸ್ಪೆಕ್ಟರು





ನನ್ನ ಗೆಳೆಯ ಅನಂತು ಹೈಸ್ಕೂಲು ಮೇಷ್ಟರಾಗಿದ್ದವನು ಇನ್ಸ್ಪೆಕ್ಟರ್ ಪದವಿಗೇರಿದಾಗ ದೊಡ್ಡ ಮೇಜವಾನಿ ನಡೆಸಿ ನಮಗೆಲ್ಲಾ ಊಟ ಹಾಕಿಸಿದ್ದ. ಈ ದನ ಕಾಯುವ ಕೆಲಸ ತಪ್ಪಿತಲ್ಲಾ ಎಂದು ಅವನಿಗೆ ಸಂತೋಷವಾಗಿತ್ತು. ಅಂದು ಊಟವಾದಮೇಲೆ ತಾಂಬೂಲ ಸವಿಯುತ್ತಾ ಕುಳಿತಾಗ ಒಂದು ಚಿಕ್ಕ ಭಾಷಣಮಾಡಿ ತಾನು ಮಾಡಬೇಕೆಂದಿರುವ ಕೆಲಸವನ್ನು ವಿವರಿಸಿದ್ದ. ಹಳ್ಳಿಯ ಕೆರೆತೋಟಗಳು, ನದಿ ನಾಲೆಗಳ ನಡುವೆ ಓಡಾಡುವುದೇ ಸಂತೋಷದ ಕೆಲಸ. ಒಂದೊಂದು ದಿನ ಒಂದೊಂದು ಊರಿನಲ್ಲಿ ತಂಗುತ್ತಾ ಆರಾಮವಾಗಿ ಅಡ್ಡಾಡುತ್ತಾ, ಆಯಾ ಹಳ್ಳಿಯವರ ಆತಿಥ್ಯವನ್ನು ಸ್ವೀಕರಿಸುತ್ತಾ ನಡೆಯುವೆ" ಎಂದೆಲ್ಲಾ ಸುಂದರ ಚಿತ್ರವನ್ನು ಕಲ್ಪಿಸಿ ನಮಗೆ ವಿವರಿಸಿದ್ದ. ಆಗ ನಮಗೆಲ್ಲಾ ಅವನನ್ನು ಕಂಡು ಸ್ವಲ್ಪ ಹೊಟ್ಟೆಯುರಿಯೂ ಬಂತೂನ್ನಿ.

ಇದೆಲ್ಲಾ ನಡೆದು ಆರು ತಿಂಗಳಾಗಿರಬಹುದು. ಒಂದು ದಿನ ಅನಂತು ಆಸ್ಪತ್ರೆಯಲ್ಲಿ ಇದಾನೆ ಎಂದು ಯಾರೋ ಬಂದು ಹೇಳಿದರು. ನನಗೆ ಗಾಬರಿಯಾಯಿತು. ಏನಾಗಿರಬಹುದು? ಎಲ್ಲಾದರೂ ಬಿದ್ದನೇ. ಯೋಚನೆ ಮಾಡಲೂ ನಿಲ್ಲದೆ, ಬೀಳುವುದನ್ನೂ ಕಾಣದೆ ಆಸ್ಪತ್ರೆಗೆ ಓಡಿದೆ. ಅಷ್ಟರಲ್ಲಿ ಗೆಳೆಯರಾದ ಚಂದಿರ, ರಾಮು, ಜಗನ್ನಾಥ್ ಎಲ್ಲರೂ ಬಂದು ಅನಂತುವಿನ ಸುತ್ತ ಕುಳಿತಿದ್ದರು. ನಾನೂ ಹೋಗಿ ಕುಳಿತೆ. ಏನೆಂದು ಸನ್ನೆಯಲ್ಲಿಯೇ ಕೇಳಿದೆ. ಚಂದಿ ಬಾಯಿಯ ಮೇಲೆ ಕೈಯಿಟ್ಟು ಸುಮ್ಮನಿರೆಂದು ಸೂಚಿಸಿದ. ಸ್ವಲ್ಪ ಹೊತ್ತಿನಲ್ಲಿಯೇ ಅನಂತು ಕಣ್ಣು ತೆರೆದು ನಮ್ಮನ್ನೆಲ್ಲಾ ನೋಡಿದ. ಒಂದು ತೊಟ್ಟು ನೀರು ಕುಡಿದು ನಮ್ಮನ್ನೆಲ್ಲಾ ಹತ್ತಿರ ಕರೆದ

ನಮ್ಮೆಲ್ಲರ ಮುಖಗಳೂ ಪ್ರಶ್ನಾರ್ಥಕ ಚಿಹ್ನೆಗಳೇ. ಅದನ್ನು ಕಂಡು "ಸ್ವಲ್ಪ ನಿಲ್ಲಿ ಹೇಳುವೆ" ಎಂದು ಹೇಳಿ ಸ್ವಲ್ಪ ಸುಧಾರಿಸಿಕೊಂಡು ಹೇಳಲು ಪ್ರಾರಂಭಿಸಿದ ಅನಂತು. "ಬೇಡಪ್ಪಾ ಬೇಡ. ಈ ಹಾಳು ಇನ್ಸ್ಪೆಕ್ಟರ್ ಕೆಲಸ. ನಾನು ಏನೋ ಎಂದುಕೊಂಡಿದ್ದೆ. ನನ್ನ ಶತ್ರುವಿಗೂ ಬೇಡ" ಎಂದು ಹೇಳಿ ಒಂದು ತೊಟ್ಟು ನೀರು ಕುಡಿದ.

"ಯಾಕೆ ಏನಾಯ್ತು?"

"ಮೊನ್ನೆ ಗೌಳಿಪುರಕ್ಕೆ ಹೋಗೋಣವೆಂದು ಹೊರಟೆ. ದಾರಿಗೊತ್ತಿರಲಿಲ್ಲ. ದಾರಿಯಲ್ಲಿಯೇ ಯಾರನ್ನಾದರೂ ಕೇಳಿದರಾಯ್ತು ಎಂದು ಹೊರಟೆ. ಮಧ್ಯಾಹ್ನ ೪ ಘಂಟೆಯವರೆಗೆ ಗೌಳೀಪುರದ ದಾರಿಯಲ್ಲಿ ಸೈಕಲ್ ತುಳಿದ ಮೇಲೆ ದಾರಿಯಲ್ಲಿ ಸಿಕ್ಕಿದ ಗೌಡನನ್ನು ಕೇಳಿದೆ ಎಷ್ಟು ದೂರ ಹೋಗಬೇಕು ಎಂದು.

ನನ್ನ ಹ್ಯಾಟನ್ನು ನೋಡಿ ಅವನು ಶಾಂತ. "ತಾವ್ಯಾರು ಬುದ್ಧಿ?" ಎಂದು ಕೇಳಿದ. "ನಾನು ಇನ್‌ಸ್ಪೆಕ್ಟರು ಕಣಯ್ಯಾ" ಎಂದೆ. ಆ ಶಬ್ದ ಕೇಳುತ್ತಿದ್ದ ಹಾಗೆ ಅವನು ನಡುಗಿದ ಕೈಮುಗಿದ. "ದಣೀರು ಯಾವೂರ್‍ಗೆ ಹೊರಟಿರೋದು?" ಅಂದ. ಅವನ ವಿನಯ ಕಂಡು ನನಗೂ ಮೋಜು ಎನಿಸಿತು. ಆದರೂ ನನಗೆ ಗೌಳೀಪುರದ ದಾರಿ ಸರಿಯಾಗಿ ಗೊತ್ತಿಲ್ಲವಾದ್ದರಿಂದ ಅವನನ್ನೇ ಕೇಳಿದೆ. "ಬನ್ನಿ ಬುದ್ದಿ ನಾನೇ ಕರ್ಕೊಂಡು ಓಯ್ತೀನಿ, ನಿಮಗೆ ದಾರಿ ತಿಳಿಯಾಕಿಲ್ಲ, ನಿಮ್ಮ ಈ ಬೈಸಿಕಲ್ಲೂ ಹೋಗಲ್ಲ ಈ ದಾರೀಲಿ" ಎಂದು ನನ್ನನ್ನು ಜೊತೆಯಲ್ಲಿ ಕರಕೊಂಡು ಹೊರಟ. ದಾರಿಯಲ್ಲಿ ನನಗೆ ದಣುವಾಯಿತೆ ಎಂದು ಕೇಳಿದ. ಪಕ್ಕದಲ್ಲಿದ್ದ ಯಾರದೋ ತೋಟಕ್ಕೆ ನುಗ್ಗಿ ನಾಲ್ಕು ಎಳನೀರು ತಂದು ಕೊಟ್ಟ. ದಣುವಾರಿಸಿಕೊಳ್ಳಲೆಂದು—ಹಾಗೇ ಮಾತಿಗೆ ಮಾತು ಹೊರಟು ಏನು ಕೆಲ್ಸ ಬುದ್ದೀ ಗೌಳೀಪುರದಾಗೆ?" ಎಂದು ಕೇಳಿದ. ನಾನು ಸ್ವಲ್ಪ ಗತ್ತಿನಿಂದಲೇ "ಅಲ್ಲಿ ಇಸ್ಕೂಲು ಇಲ್ಲವೇನಯ್ಯಾ, ಅದನ್ನು ನೋಡೋಕೆ ಹೋಗ್ತಿದೀನಿ. ಇನ್‌ಸ್ಪೆಕ್ಷನ್ ಇದೆ" ಅಂದೆ. ಏಕದಂ ಅವನ ಮುಖದ ಛಾಯೆ ಬದಲಾಯಿಸಿತು. ಕುರಿಯ ದೃಷ್ಟಿ ತೋಳನ ದೃಷ್ಟಿಯಾಗಹತ್ತಿತು. "ಇಸ್ಕೂಲು ಇನ್ಸ್‌ಪೇಕ್ಟ್ರಾ?" ಎಂದು ಹೂತ್ಕರಿಸಿದ.

"ಹೌದು" ಎಂದೆ.

"ಮೊದ್ಲೆ ಯಾಕ್ಹೇಳಿಲ್ಲರ್‍ರೀ. ಸುಮ್ನೆ ಈಟೊಂದು ಸ್ರಮ ತಗೊಂಡೆ. ಓ ೯ ೯" ಎಂದು ಒಂದು ಸೆಕೆಂಡು ಅಲ್ಲಿ ನಿಲ್ಲದೆ ನಡದೇಬಿಟ್ಟ. "ಏ ... ಗೌಡ.... ....ಗೌಡರೇ" ಎಂದು ನಾ ಕೂಗಿದ್ದೆಲ್ಲಾ ನಿರರ್ಥಕವಾಯ್ತು. ಆ ಪ್ರಾಣಿ ನಾನು ಪೋಲೀಸ್ ಇನ್‌ಸ್ಪೆಕ್ಟರು ಅಂತ ತಿಳಿದಿದ್ದ ಅಂತ ಕಾಣುತ್ತೆ.

ಆಗಲೇ ಸಂಜೆಯಾಗುತ್ತಾ ಬಂದಿತ್ತು. ನನಗೆ ಆಗಲೇ ಹೆದರಿಕೆ ಹುಟ್ಟಿತ್ತು. ಹಾಗೇ ಸೈಕಲ್ ತಳ್ಳಿಕೊಂಡು ಮುಂದೆ ನಡೆದೆ. ಎಲ್ಲೂ ಒಂದು ನರಪ್ರಾಣಿಯೂ ಕಾಣುತ್ತಿರಲಿಲ್ಲ. ಬರಬರುತ್ತಾ ಕುರುಚಲು ಗಿಡಗಳ ಒಂದು ಕಾಡು ಬಂತು. ಏನಾದರೂ ಆಗಲಿ ಎಂದು ಹೆಜ್ಜೆ ಇಡುತ್ತಿದ್ದೆ. ಮಬ್ಬು ಕತ್ತಲೆ ಕವಿಯುತ್ತಿತ್ತು.

ಪಕ್ಕದ ಗಿಡಗಳ ಸಂದಿನಿಂದ ಒಬ್ಬ ಆಸಾಮಿ ಸರಕ್ಕನೆ ಎದುರು ಬಂದು ನಿಂತ. "ಯಾರು ಸ್ವಾಮಿ ನೀವು" ಎಂದ. ನಾನು ತಡವರಿಸುತ್ತಾ "ನಾನು ಇನ್ಸ್ಪೆಕ್ಟರು ಸ್ಕೂಲು...." ಎಂದು ಏನೇನೋ ಹೇಳಲು ಹೊರಟಿದ್ದೆ. ಅಷ್ಟ ರಲ್ಲಿಯೇ ಆ ಧಾಂಡಿಗ "ಹೋ" ಎಂದು ಕೂಗಿದ. ಹತ್ತಾರು ಜನ ಬಂದು ಸೇರಿದರು. "ಇವನೇ ಕಣ್ರಲೇ ಇನ್ಸ್ಪೆಕ್ಟ್ರು. ಇಲ್ಲೂ ಬಂದವ್ನೆ ಕಳ್ಳಭಟ್ಟಿ ಹುಡುಕಾಕೆ" ಎಂದ. "ಹಾಕ್ರಲಾ. ಅಲ್ಲೇನು ನೋಡ್ತೀರಾ" ಎಂದು ನಾಲ್ಕಾರು ಜನ ಕೂಗಿದರು. ಕೈಯ್ಗೆ ದೊಣ್ಣೇಲಿ ಬಿತ್ತು ಏಟು. ಮೊದಲು ನನ್ನ ಹ್ಯಾಟು ಹಾರಿಹೋಯ್ತು. ಆ ಮೇಲೆ ಬಲವಾದ ಒಂದು ಏಟು ನೆತ್ತಿಗೆ ಬಿತ್ತು. ಅಷ್ಟೆ ನನಗೆ ಜ್ಞಾಪಕ. ಇಲ್ಲೇ ಪುನಃ ಜ್ಞಾನ ಬಂದದ್ದು" ಎಂದು ಹೇಳಿ ಅನಂತು ಮತ್ತೊಂದು ಲೋಟಾ ನೀರು ಕುಡಿದ.

"ಏನಯ್ಯಾ, ಯಾರು ನಿನ್ನನ್ನ ಕರೆದುಕೊಂಡು ಬಂದರು? ಯಾರು ನೋಡಿದರು? ಇಲ್ಲಿಗೆ ಹೇಗೆ ಬಂದೆ?" ಎಂದು ನಾವೆಲ್ಲಾ ಒಟ್ಟಿಗೆ ಕೇಳಿದೆವು.

"ಅದೇ ಹೇಳ್ತೀನಿ; ಯಾಕೆ ಆತರ ಮಾಡ್ತೀರ. ನಾನು ಹೋಗುವ ಪ್ರೋಗ್ರಾಂ ತಿಳಿದಿತ್ತು ಗೌಳೀಪುರದ ಮೇಷ್ಟರಿಗೆ. ಯಾಕೆ ಬರಲಿಲ್ಲವೊ, ದಾರಿ ತಪ್ಪಿತೊ" ಎಂದು ಯೋಚಿಸಿ, ಆ ಪ್ರಾಣಿ ಹುಡುಕಿಕೊಂಡು ಬಂತು.

ನಾಲ್ಕು ಜನರನ್ನು ಜೊತೆಯಲ್ಲಿ ಕರೆದುಕೊಂಡು ಲಾಟೀನು ಹಿಡಿದು ಕೊಂಡು ಬಂದಿದ್ದರು. ನನ್ನ ನರಳುವಿಕೆ ಕೇಳಿ, ನನ್ನ ಸ್ಥಿತಿ ಲಕ್ಷಿಸಿ, ಊರಿಗೆ ಎತ್ತಿಸಿಕೊಂಡು ಹೋಗಿ ಮಾರನೇ ದಿನ ಗಾಡಿಯಲ್ಲಿ ಇಲ್ಲಿಗೆ ಸಾಗಿಸಿದರಂತೆ— ಈಗ ಹೀಗಿದ್ದೀನಿ ನೋಡಪ್ಪ" ಎಂದ.

"ಈಗ ಹೇಗಿದೆ ನಿನ್ನ ಪ್ರಕೃತಿ, ದೇಹ"

"ಪರವಾಗಿಲ್ಲ. ಇನ್ನು ನಾಲ್ಕು ದಿನಕ್ಕೆ ಆಸ್ಪತ್ರೆಯಿಂದ ಮನೆಗೆ ಹೋಗ ಬಹುದು ಎಂದು ಡಾಕ್ಟರು ಹೇಳಿದಾರೆ" ಅಂದ ಅನಂತು. ಹೊರಡುವಾಗ ಅನಂತು ಮತ್ತೊಂದು ಮಾತು ಹೇಳಿದ. "ಅಂದ ಹಾಗೇ ಹೇಳೋದು ಮರೆ ತಿದ್ದೆ. ನಿನ್ನೆ ನಮ್ಮ ಡಿ. ಇ. ಓ. ಬಂದಿದ್ದರು ನೋಡೋಕೆ. ಅವರಲ್ಲಿ ಅರಿಕೆ ಮಾಡಿಕೊಂಡಿದ್ದೇನೆ. "ಪುನಃ ನನ್ನನ್ನ ಮೇಷ್ಟರನ್ನಾಗಿಯೇ ಮಾಡಿಬಿಡಿ" ಅಂತ. ಭರವಸೆ ಕೊಟ್ಟಿದ್ದಾರೆ.

"ಮೊದಲೇ ನಾವು ಹೇಳಿದರೆ ನೀ ಕೇಳಲಿಲ್ಲ" ಎಂದು ಗಂಭೀರವಾಗಿ ನುಡಿದ ಚಂದಿರ.

— ಹಾ. ರಾ. (ಹಾಸನ)



# ಕಂಡಕ್ಟರ್ ಕಂದಾರಿ



"ಗಿಡಗ"

"ಕಂದಾರೀ! ಕಂದಾರೀ!
  ಕಂಡಕ್ಟರ್! ಏ, ಕಂದಾರೀ!"
ಕೂಗ್ ಕೇಳಿಸ್ತು—ಬಸ್ಸಿನ್ ತಾವ
  ಒಂದ್ ಎಳ್ಡ್ ಮೂರ್ ನಾಕ್ ಸಾರಿ ॥ ೧ ॥

"ಇವ್ನ್ ಯಾವ್ನೋನೀ ಕಂದಾರೀ
  ಬಸ್ ಕೆಲ್ಸಕ್ಕ್ ಬಂದಾ–·–ರೀ?
ಆರಡಿಯಾಳು! ದೊಗಳೆ ಪೆಜಾಮಾ!
  ಬಸ್ ಯಿಡಿಸುತ್ತೈ? ರಾಂ ರಾಮಾ! ॥ ೨ ॥

ಸುತ್ತಿನ್ ಬೀದೀ ಸಮುದ್ರದಾಗೇ
  'ಕಣ್ಣಿನ್ ಅಡಗನ್ ಓಡಿಸ್ದೆ.
ಎಲ್ ಕಂದಾರೀಂತ್ ಎಲ್ ಕಂದಾರೀಂತ್
  ಖಾಕಿ ಕುಡ್ತಾನ್ ನೋಡಿಸ್ದೆ. ॥ ೩ ॥

ಓಡೋಡಿ ಬಂದ—'ಕಂದಾರಿ'
  ತರಗೆಲೆ ಬಂದಂಗ್ ತೂರಿ.
"ನಾಕೂಚೆಲ್ರೆ ಆಡಿಯಿರಬೈದ?
  ಕಂದಾರಿ ಯೆಂಗಾದಾನೀ ಹೈದ!" ॥ ೪ ॥

ತಲೆಮ್ಯಾಗಿಲ್ಲ ಕಂದಾರಿ ಪಗಡಿ.
ಆಃಕ್ಷಿ! ಅಃಕ್ಷಿ! ಶೀತ? ನೆಗಡಿ?
ಸಿಂಬಳಸುರಕ ಕಂದಾರಿಯಿವನಾ?
ಕಿವಿತುದಿಗ್ಯಾವ್ದೀ ದೇವರ್‌ದವನ?" ॥ ೫ ॥

ಯೆಂಗಾದಾನಿವ ಕಂದಾರೀ?
ಕನ್ನಡ್‌ಸೀಮೋದ್ ಈ ಮಾರೀ!
ಅಕ್ಕಿತಿಮ್ಮನಳ್ಳಿ ಮುಕ್ಕನ ಹಾಂಗೇ
ಅವ ಮಾತಾಡೋದು ಕೇಳಿಸ್ತು ನಂಗೆ ॥ ೬ ॥

ಅವನ್ನೆ ಕೇಳದೆ—ನನ್ ಸಂದೇಹ.
ಮೊಕ್ಕವ ಬಳ್ಕೊಂಡ್ ನಾಚ್ಕೆಲೇಹ:
"ಸುಮ್ಮನೆಲ್ರು ನನ್ನ ಹಂಗಂತಾರೆ
ಇದೆ ಕಾಣ್ರೇ ಇವರಿಕ್ಕೋ ಹಾರೆ!" ॥ ೭ ॥

''ಯಾಕೊ ಇವ್ನ ಮಾತು ನಂಬಕಾಗೊಲ್ಲ.
ನನಗೊ—ಕಿವಿಯು ಬಾಯಿ ಬಿಡ್ತದೆ ಜೊಲ್ಲ.
ಇವ್ನ ನ್ಯಾಸ್ತದೊರ್ಗೆ ಒಂದಿಸ್ಟು ನಾಸ್ಟ
ಕೊಡ್ಸ್ನಿ—ಬತ್ತದೇ ಕತೆ ಅದು ಸ್ಪಸ್ಟ.'' ॥ ೮ ॥

''ಪುಟ್‌ರಂಗಪ್ಪ! ನಿಂಗೆ 'ಕಂದಾರಿ' ಗೊತ್ತು?''
''ನಾನೆ ಅಲ್ವ ಅವ್ನ ಕರೆದುದೀಟೊತ್ತು?''
''ಅಂಗಾರ್ ಔನಿಗೀ ವಿಚಿತ್ರೆಸರ್ ಯಾಕ?''
''ಓವೊ! ಅವ್ನ ಕತೆ ಕೇಳಿಸ್ಕೊಬೇಕ?'' ॥ ೯ ॥

''ಕೇಳಿಯಪ್ಪ: ಇವ ನಮ್ಮಳ್ಳಿ ಮುಕ್ಕ.
ಯೆಂಗಸೆಂದ್ರೆ ಇವಗಂಜಿಕೆ—ಪುಕ್ಕ!
ಅಪ್ಪ ಅಮ್ಮಗಿವ—ಬೈರೂ ವುಡಗ.
ಇವಗೊ—ಯೆಂಗಸಂದ್ರೆ ನಡಕಾ ನಡಕ. ॥ ೧೦ ॥

ಮೂರು ವೊರ್ಸ ಯಿಂದೆ ಇವ ಇಲ್ಲಿ ಬಂದ.
ಸತ್ಯವಂತ—ಕೆಲ್ಸ ಮಾಡ್ತಿದ್ದ ಚೆಂದ.
ತಿಕೆಟು ಬುಕ್ಕು ತ್ರಿಪ್‌ಸೀಟು ಇವೆಲ್ಲಾ
ಠಾಕುಠೀಕು—ಒಂದೀಟು ತಪ್ಪಿಲ್ಲಾ. ॥ ೧೧ ॥

ನಾಕು ತಿಂಗಳಿಂದೆ ಬಂದಿತೊಂದಮ್ಮ.
ಅವಳ್‌ದು ತಿಕೀಟು ವಸೂಲಿಗೆ ನಮ್ಮ
ಬೈರು ಬಂದವನೆ—'ಅಮ್ಮ ತಿಕೀಟು?'
ಅಂದ್ರವಮ್ಮ ಅಂತು: 'ಕೈಸೆ ತಿಕೀಟು?' ॥ ೧೨ ॥

ಇವನ ಕನಡ ಅದಕ್ ಅರ್ತವೆ ಆಗ್ದು.
ದುಡ್ನ್ ಕೊಡೊಕೆ ಕೈಮುಂದೆನೆ ಸಾಗ್ದು.
ಲಂಗಲಂಗದೊಳಗಿತ್ತು ಕಂದಾರಿ
ರಂಗುವಸ್ತ್ರ ತಲೆಮೇಗಡೆ ಹಾರಿ ॥ ೧೩ ॥

ಇಲ್ಲಿ ವಸೂಲಿಗೆ ಏನಪ್ಪ ದಾರಿ?
ದೇವ್ರೇ, ಬಚಾವ್‌ಮಾಡು ಈವೊಂದು ಬಾರಿ!
ಒಳ್ಳೆ ಬುದ್ಧಿಕೊಡು ಈ ಯಂಗಸಿಗೆ.
ತಿಕೆಟು ಕೊಂಡುಕೊಳಲಿವಳೀ ಬಸಿಗೆ. ॥ ೧೪ ॥

ವುಡುಗ ಪೆಚ್ಚಾದ್ದ ಕಂಡು ಕಂದಾರಿ
ಕುರಿಯ ಕಂಡರೆಂಗೊ ವೂರಿನ ಮಾರಿ
ಅಂಗೇನೇವ—ಊಂಪ್ಪ—ಯಿರಿಯಿರಿ ಯಿಗ್ಗಿ
ದುಡ್ಡ ಚೀಲದಿಂದೆತ್ತೊವಂಗೆ ಬಗ್ಗಿ— ॥ ೧೫ ॥

ಕಂಡಿವ್ರಲ್ಲ ನೀವವರ ಬಟ್ಟೇಯು?
ಸರಟು ಮುಚ್ಚುತ್ತೈತೆಂಗೌರ್ ವೊಟ್ಟೇಯು?
ಅದ್ನ ಯಾವುದೋ ಮಾಯ್ದಾಗಂಗೆತ್ತಿ
ಗುರಿಯ ಮಾಡಿಕೊಂಡು ಬೈರೂ ನೆತ್ತಿ— ॥ ೧೬ ॥

ಚಿಕ್ಕ ಮಕ್ಕಳಿಡ್ದಿ ಚೀಪ್ತಾವಲ್ಲಪ್ಪ—
ಚಿರಕ್! ಚಿರಕ್! ಅದ ಕೈತುಂಬ ದಪ್ಪ—
ಬೈರೂ, ಪಾಪ, ಮೂತಿ ಮೇಕೆಳಗೆಲ್ಲಾ
ಆಲಿನ್ ಅಬಿಸೆಕ! ಕ್ಯೋಳ್ತಿಯ ಗುಲ್ಲ! ॥ ೧೭ ॥

ಸೋತೆನೆಂದ ಬೈರು: 'ಸಣ್ಣ ನಮ್ಮವ್ವ!
(ಎಗ್ಗುಸಿಗ್ಗಿಲ್ಲದ ಕಂದಾರಿ ದೆವ್ವ!)'
ಬಸ್ಸು ಬಸ್ಸೆ ಹೋ ಎಂದಿತು ಸಾಕ್ಸಿ:
'ಪುಟ್ಟ ಬೈರೂ! ನೀ ಕಂದಾರಿ ಪಕ್ಸಿ!' ॥ ೧೮ ॥

ಇದೆ ಕನಪ್ಪ ಕತೆ: ಕಂದಾರಿ ಹಾಲ
ಕುಡಿದ ಅವೊತ್ತಿಂದ ಬೈರು 'ಕಂದಾರಿ.'
ಇದನ ನೆನಸಿಕೊಂಡು ಪಕಪಕ ನಗುತೀವಿ
ನಾವು ಬಸ್ಸಿನೋರು ನೂರು ಹತ್ತು ಬಾರಿ." ॥ ೧೯ ॥

"ಪೊಗದಸ್ತಾಗದೆ ಪುಟ್‌ರಂಗಪ್ಪ
ಕಂದಾರಿ ಆಲಿನ ಚಿಲುಮೆ ಕತೆ!
ನೀವಲ್ಲಿದ್ದೋರು ಪುನ್ಯ ಮಾಡಿದ್ರಿ—
ನಾನ್ ಇರ್ಲಿಲ್ವೇ—ಅದೆನೆ ವೆತೆ!" ॥ ೨೦ ॥

—o—

# ವಿದ್ವಾನ್ ತಂಬೂರಿ ತಮ್ಮಯ್ಯ

ಬರಬೇಕು ತಪ್ಪದೇ ಬರಲೇಬೇಕು ಎಂದು ಪೀಡಿಸಿ ಆಹ್ವಾನಿಸಿದ್ದರ ಮೇಲೆ ಶಲ್ಯ ಹೊದ್ದು ಹೊರಬೀಳಲೇ ಬೇಕಾಯಿತು. "ದೊಡ್ಡ ಬಂಗಲೆ ಬಸವನಗುಡಿ ಬಡಾವಣೆ—ಲಕ್ಷಣವಾದ ಹೂದೋಟ—"ಆಯಿಜಾ" ಎಂಬ ರೇಡಿಯೋ ಆಹ್ವಾನ ಹೊರಸೂಸುತ್ತಿರುವ ಭಾರಿ ಬಂಗಲೆ ಇದೆ ನೋಡಿ ಅದರ ಪಕ್ಕದ ಸಂದಿನಿಂದ ಮೂರು ಮಾರು ಹೋಗಿ ಎಡಕ್ಕೆ ಹೊರಳಿದರೆ ಒಂದು ಎಂಜಲು ಡಬ್ಬ ಇದೆಯಲ್ಲ ಅದರ ಎದುರಿನ ತಾರ್ಸಿ ಮಹಲಿನ ಔಟ್ ಹೌಸ್ ಪಕ್ಕದ ಗ್ಯಾರೇಜಿನಲ್ಲಿ ಅರ್ಧ ನಂದು. ಅಲ್ಲೇ ಕಾದಿರುತ್ತೇನೆ; ಖಂಡಿತ ಬಂದು ಬಿಡಿ" ಎಂದು ತಂಬೂರಿ ಶೃತಿಯಂತೆ ನಾದ ಹೊರಡಿಸಿದ. ತಮ್ಮಯ್ಯನವರ ಮಾತಿನಂತೆ ಹುಡುಕುತ್ತಾ ಹೊರಟಾಗ ಸಾಕ್ಷಾತ್ ತಮ್ಮಯ್ಯನವರೇ ಮಡಿ ಯುಟ್ಟು ಮಹಲಿನ ಮುಂದೆ ನಿಂತು "ಬರಬೇಕು ಬರಬೇಕು" ಎಂದು ಕರೆ ದೊಯ್ದರು.

ಅರ್ಧ ಗ್ಯಾರೇಜೇ ಅಲಂಕರಿಸಲ್ಪಟ್ಟಿತ್ತು. ಚಾಪೆ ಹರಿದಿದ್ದಾದರೇನು ಆ ವಿಶ್ವಾಸದ ಆಹ್ವಾನದ ಮುಂದೆ ಮುರಿದ ಮಣೆಯೂ ಮಂದಾಸನದಂತೆ ಕಾಣಿ ಸುತ್ತಿತ್ತು. ಆಶ್ಚರ್ಯವಲ್ಲದೆ ಮತ್ತೇನು? ಆಯುಧ ಪೂಜೆ ದಿನ ಸಂಗೀತ ವಾದ್ಯ ಗಳ ಪೂಜೆ ಮಾಡುವುದು ವಾಡಿಕೆ—ಆದರೆ ಈ ಆಶ್ವೀಜ ಶುದ್ಧ ಏಕಾದಶಿಯ ದಿನ ಅನನ್ಯ ಭಕ್ತಿ ಪ್ರದರ್ಶನ ಮಾಡುತ್ತಾ ತಂಬೂರಿ ಪೂಜೆ ಮಾಡುವ ಈ ತಮ್ಮಯ್ಯನವರನ್ನು ನೋಡಿ ನಾನು ನಗಲೇ ಅಳಲೇ—ಕೇಕೆ ಹೊಡಿಯಲೇ ಏನು ಮಾಡಲಿ ಎಂದು ಯೋಚನೆಯಾಯಿತು. ದಿವ್ಯಾಲಂಕೃತವಾದ ತಂಬೂರಿಯ ಬಲಭಾಗದಲ್ಲಿ ದೊಡ್ಡದೊಂದು ಶಂಖ ಇರಿಸಿದ್ದರು. ಅದರ ಸುತ್ತಾ ದಾಸ ವಾಳದ ಹುವ್ವಿನಿಂದ ಚಿತ್ರ ಕೆತ್ತಿದ್ದರು. ಎಡಭಾಗದಲ್ಲಿ ಹಳೆಯ ಕಿದಿಹರಿದ ಶೃತಿ ಪೆಟ್ಟಿಗೆ ಅದರ ಮೇಲೆ ನಾಲ್ಕು ಎಳ್ಳಿನ ಕಾಳುಗಳಿಂದ ಪೂಜೆ ಮಾಡಿದ್ದರು. ಎಳ್ಳು ಕಾಳುಗಳ ಪಕ್ಕದಲ್ಲಿ ಚಿಕ್ಕ ಪಂಚಪಾತ್ರೆಯಲ್ಲಿ ಕೊಂಚ ನೀರೂ ಇತ್ತು. ಇದೆಲ್ಲದರ ಐತಿಹ್ಯ ಕೊಂಚವಾದರೂ ನನ್ನ ಮೆದುಳಿಗೆ ಹೊಳೆಯಲಿಲ್ಲ.

ಮಡಿ ಉಟ್ಟ ತಮ್ಮಯ್ಯನವರು ದೊಡ್ಡ ಉಂಡೆ ಕರ್ಪೂರ ಹಚ್ಚಿ, ಎಡಗೈ ಯ್ಯಲ್ಲಿ ಘಂಟೆ ಗಣಗಣಿಸುತ್ತಾ ಬಾಯಲ್ಲಿ ಮಂತ್ರ ಪಿಟಿಪಿಟಿ ಗುಟ್ಟಿಸುತ್ತಾ ಆರತಿ

ಎತ್ತಿದರು ಆ ತಂಬೂರಿ ದೇವರಿಗೆ. ಮಂಗಳಾರತಿ ಮುಂದೆ ಹಿಡಿದರು. ನಾನು ಕೈ ಅಡಿಸಿ ಕಣ್ಣಿಗೊತ್ತಿಕೊಂಡೆ. ಕೈ ಮುಗಿದು ಪ್ರದಕ್ಷಿಣೆ ಮಾಡಿ ಸಾಷ್ಟಾಂಗ ನಮಸ್ಕಾರ ಹಾಕಿ ಹೂ ಎಸೆದರು ಆ ಶಂಖದ ಮೇಲೆ ಮತ್ತು ಆ ಶೃತಿ ಪೆಟ್ಟಿಗೆ ಮೇಲೆ. ತಾಟಿನಲ್ಲಿದ್ದ ಚರುವು ಹಂಚಿದರು. ಚರುವೇನು ಗೊತ್ತೆ? ಕಳ್ಳೆ ಗುಗ್ಗರಿ ಒಂದು ದೊನ್ನೆ—ಒಂದೊಂದು ತಂಬಿಟ್ಟು, ಪುಳ್ಳಂಗಾಯಿ ಉಂಡೆ. ಇದು ಯಾವ ದೇವರಿಗೆ ಪ್ರೀತಿಯೋ ಶಿವನೇ ಬಲ್ಲ.

"ಈ ಪೂಜೆ ಅರ್ಥವಾಗಲಿಲ್ಲ ತಮ್ಮಯ್ಯನವರೆ" ಎಂದು ಕೇಳಿದೆ.

"ಅರ್ಥವಾಗದಿದ್ದುದು ಆಶ್ಚರ್ಯವಲ್ಲ........ಇದೊಂದು ಕರ್ಮ—ಒಂದು ದೃಷ್ಟಿಯಿಂದ ಧರ್ಮವೆಂದೇ ಹೇಳಬೇಕಾಗುತ್ತೆ" ಎಂದು ತಾವೂ ಎರಡು ತಂಬಿಟ್ಟು ಬಾಯಿಗೆಸೆದುಕೊಂಡರು. ನಾನು ಸುಸ್ತು. ಇದಾವ ಪೂಜೆ ಏನು ಕಥೆ ಏನು ವ್ರತ—ರಾಮನವಮಿಯೆ! ಭೀಮನ ಅಮಾವಾಸ್ಯೆಯೇ—ವಟ ಸಾವಿತ್ರಿ ಹುಣ್ಣಿಮೆಯೆ? ಯಾವ ಪುರಾಣದಲ್ಲಿ ಶೌನಕಾದಿ ಮುನಿಗಳು ಸೂತ ಪುರಾಣಿಕರಿಗೆ ಹೇಳಿದರು? ಇದೇನು ತಂಬೂರಿ ಪೂಜೆ, ಶಂಖಾರಾಧನೆ" ಎಂದು ಕಕೋಹಲದ ಸೋಗು ಹಾಕಿ ಮುಖವನ್ನು ಪ್ರಶ್ನಾರ್ಥಕ ಚಿನ್ಹೆಯಂತೆ ಮಾಡಿದೆ. ಮತ್ತೆರಡು ಕಾಳು ಕಳ್ಳೆಗುಗ್ಗರಿ ಬಾಯಿಗೆಸೆದುಕೊಳ್ಳುತ್ತಾ ತಮ್ಮಯ್ಯನವರು ಆರಂಭಿಸಿದರು.—

"ಇದು ಕುತೋಹಲದ ಪ್ರಶ್ನೆಯಲ್ಲ ರಾವ್‌ಜಿ, ಕುಹಕತನದ ಸೋಗು.... ನನ್ನ ಗ್ರಹಚಾರಕ್ಕೆ ಜಾತಕ ತಿದ್ದಿದರೆ ಸರಿಹೋಗುತ್ತದೆಯೆ? ಆದರೂ ಕೇಳಿ ನಿಮ್ಮನ್ನ ಕರೆದಿದ್ದೆ ಈ ವ್ರತದ ಐತಿಹ್ಯ ಹೇಳೋಕೆ. ನಿಮಗೆ ತಿಳಿದ ಯಾರಿಗಾದರೂ ಸಂಗೀತದ ಹಂಬಲವಿದ್ದರೆ ಆ ಹುಚ್ಚು ಬಿಟ್ಟುಬಿಡಲು ಬುದ್ಧಿ ಹೇಳಲೆಂದೇ ಈ ಶಂಖ ಪೂರೈಸುತ್ತಿದ್ದೇನೆ ಕೇಳಿ.....ಸಂಗೀತ ಸೇವೆ ಮಾಡುತ್ತಿದ್ದೇನೆಂತ ವ್ಯಾಳದವನಿಗೆ ಶೃತಿಹಿಡಿದವನ ಪಾಡಾಯ್ತು ನನ್ನ ಪಾಡು, ಆ ವಿದ್ವಾನ್ ದಾಮೋದರನ್ ಬೆನ್ನು ಬಿದ್ದದ್ದು...."

"ವಿದ್ವಾನ್ ದಾಮೋದರನ್ ಒಳ್ಳೆ ಹೆಸರು ಮಾಡಿದ್ದಾನಲ್ಲಾ ಆತ!—"

"ಮಾಡದೆ ಏನು ಮಾಡಾನು ನಮ್ಮಂಥ ಕಮಂಗಿಗಳು ಶೃತಿಹಿಡಿಯೋ ಕಿರೋವಾಗ. ಈ ಬೆರಳುಪಾಡು ನೋಡಿ" ಎಂದು ಬಲಗೈಯ್ಯ ತರ್ಜನಿ ಬೆರಳನ್ನು ಮುಂದೆ ಮಾಡಿದರು. ಪಾಪ! ಮುಂಭಾಗ ಸವೆದು ಅರ್ಧ ಬೆರಳಾಗಿತ್ತು.

"ತ್ಸೊತ್ಸೊತ್ಸೊ....ರೈಲು ಕಂಬಿಗೆ ಸಿಕ್ಕಿತ್ತೆ ಪಾಪ, ಆ ಪಾಪಿ ಬೆರಳು!...." ಎಂದು ವಿಚಾರಿಸಿದೆ.

"ರೈಲು ಕಂಬಿಗೆ ಸಿಕ್ಕಿದ್ದರೆ ನಾನು ವ್ಯಥೆಯೇ ಪಡುತ್ತಿರಲಿಲ್ಲ. ಕಾಣದ ವಿದ್ಯೆಗೆ ಮುಂದೊಮ್ಮೆ ಕಂಚು ಕಂಠಿಯಾದೇನು—ಕಛೇರಿ ನಡೆಸೇನು ಎಂಬ ಅಂಥ ನಂಬಿಕೆ ಆ ಪಾಪಿಯ ನಯವಾದ ಮಾತಿಗೆ ಮರುಳಾಗಿ ನನ್ನ ಬೆರಳು ಬಲಿಕೊಟ್ಟೆ. ಹನ್ನೆರಡು ವರ್ಷ ತಾರಕ ಮಂದರ ಮಧ್ಯಮ ಶೃತಿಗಳನ್ನು ಕರತಲಾಮಲಕಮಾಡಿ ಆಡಿಸಿದ ತರ್ಜನಿ ಸ್ವಾಮಿ ಇದು. ಇದೇ ತಪಸ್ಸು ಶಿವನಲ್ಲಿ ಮಾಡಿದ್ದರೆ ಕೈಲಾಸ ಕಾಣಬಹುದಿತ್ತು. ಈಗೇನಿದೆ—ದಕ್ಕಿದ್ದು ಒಡಕು ತಂಬೂರಿ—ದೊಡ್ಡ ಶಂಖ—ಶೃತಿ ಪೆಟ್ಟಿಗೆ...."

"ನಿಮಗೆ ವಿದ್ಯವನ್ನೇ ಹೇಳಲಿಲ್ಲವೆ ಆತ"

"ಇಕೊ ನಾಳೆ—ಗಂಟಲು ಸರಿಮಾಡಿಕೊ—ಶೃತಿ ಹೊಂದಿಸಿಕೊ—ನೀರು ಸೇದು—ಕಟ್ಟೆಗೆ ಒಡಿ – ಪಂಚೆ ಒಗಿ—ನೆಲ ಗುಡಿಸು—ಕಾಲೊತ್ತು—ತಲೆ ಶೂಲಿ —ಅಮೃತಾಂಜನ—ಒಂದೆ ಎರಡೆ ಸಾವಿರ ಕೆಲಸ ಹಚ್ಚುವುದರಲ್ಲೇ ಸತಾಯಿ ಸಿದನಲ್ಲದೆ ಒಂದು ದಿನವಾದರೂ ನನ್ನಿಂದ ಸಾ ಪಾ ಸಾ ಕೂಗಿಸಲಿಲ್ಲ. ಇಂದು ನಾಳೆ ಎಂದು ಹನ್ನೆರಡು ವರ್ಷವಾಯಿತು."

"ಎಲ ಚಂಡಾಲ .. ಖಳ ಅವನು"

"ದುರುಳಾನ್ನಿ ಒಪ್ಪತ್ತೆ ...ಹೂಂ ಅವನ್ನಂದ್ರೇನ್ರಿ ಪ್ರಯೋಜನ—ಅವನ ಗುಂಪಿಗೆ ಸೇರಿದ್ದು ನನ್ನ ತಪ್ಪು—ಮುಂದೆ ವಿದ್ವಾಂಸ ತಮ್ಮಯ್ಯನಾಗ್ತೀನೀನ್ನೊ ನನ್ನ ದುರಾಶೆಯ ತಪ್ಪು . ಎಲ್ಲಕ್ಕೂ ಮಿಗಿಲಾಗಿ ಆ ಮೀನಾಕ್ಷಿಯ ತಪ್ಪು!"

"ಮೀನಾಕ್ಷಿ! ಅದ್ಯಾರು ಆಕೆ?"

"ಅದೇ ಮೇಷ್ಟ್ರು ಮೋಜಪ್ಪಯ್ಯನ ಮಗಳು"

"ಅವಳೆಲ್ಲಿ ಸಿಕ್ಕಳು ನಿಮಗೆ?"

"ಇನ್ನೆಲ್ಲಿ ಇಲ್ಲೇ....ಹನ್ನೆರಡು ವರ್ಷದ ಕೆಳಗಿನ ಮಾತು—ಮೀನಾಕ್ಷಿಗೆ ಆಗ ಕೇವಲ ಹದಿನೇಳು ವರ್ಷ ಸೊಗಸಾದ ಮೈಸೂರು ಪಾಕಿನ ಹಾಗಿದ್ದಳು— ಕಲ್ಕತ್ತ ರಸಗುಲ್ಲಾದಂತೆ ರಾರಾಜಿಸುತ್ತಿದ್ದಳು. ಅವಳನ್ನಲ್ಲದೆ ಬೇರಾರನ್ನೂ ಆಗ ಕೂಡದೆಂದು ನನ್ನ ಮನಸ್ಸಿನ ಕಟ್ಟಪ್ಪಣೆಯಾಗಿತ್ತು. ಅದೇನೊ ಆ ಮೋಹಿನಿಗೆ ಸಂಗೀತಗಾರನನ್ನೇ ಆಗಬೇಕೆಂಬ ಹಂಬಲು. ಅವರಪ್ಪ ಬೇಡ ಈ ಸಂಗೀತದವರ ಸಹವಾಸ ಕಂಚು ಕಂಠಿ ನೋಡಿ ಕತ್ತಿಗೆ ತಾಳಿ ಕಟ್ಟಿಸಿಕೊ

ಬೇಡ ಸಂಗೀತ ನಂಬಿದೋನು ಸತ್ತ....ಎಂದು ಸಾರಿ ಸಾರಿ ಹೇಳಿದರೂ ಆ ಉಡುಪಿ ಹೋಟೆಲಿನ ಮಸಾಲೆ ದೋಸೆಯಂತಹ ಸೊಗಸಿ ಒಪ್ಪಲಿಲ್ಲ. ನಾನು ಹಾರಾ ಹಿಡಿದು ನಿಂತೆ—'ಹಾಡು ಹೇಳಿ ಕೊರಳಿಗೆ ಹಾಕು' ಎಂದಳು ಮೀನಾಕ್ಷಿ. ಈ ಕೊಡಗಿನ ಕಿತ್ತಳೆಯನ್ನು ನಾನು ಸಂಗೀತ ಕಲಿತೇ ಕೈಹಿಡಿದು ಕರೆದೊಯ್ಯುವೆನೆಂದು—ಈ ದಾಮೋದರನ್ ಗುಂಪಿಗೆ ಸಿಕ್ಕಿಬಿದ್ದೆ. ಹನ್ನೆರಡು ವರ್ಷ ತಂಬೂರಿ ಕೈಗೆ ಕೊಟ್ಟು ಕಾಡಿಸಿದ ಈ ವಿದ್ವಾನ್...."

"ಮೀನಾಕ್ಷಿ ಗತಿ!!"

"ಇನ್ನೊಬ್ಬ ಖದೀಮ 'ತೆರಿ ಚಾಂದನಿ—ಮೆರಿ ಚಾಂದನಿ' ಎಂದು ಸಿನಿಮಾ ಹಾಡು ಹೇಳಿ ಹಾರಿಸಿಕೊಂಡು ಹೋದ ಮೀನಾಕ್ಷಿನ್ನ. ಆ ನೋವು ಮರೆಯಲೇ, ಮೈಸೂರು ಪಾಕು ಬಿಟ್ಟುಬಿಟ್ಟೆ—ಕೊಡಗಿನ ಕಿತ್ತಲೆ ತಿನ್ನೊಲ್ಲ—ಮಸಾಲೆ ದೋಸೆ ಹತ್ತಿರ ಸೇರಿಸೊಲ್ಲ. ಇಡೀ ಜೀವನ ಜಿಗುಪ್ಸೆಮಯವಾಯಿತು. ನೋಡಿ—ಈ ತಂಬೂರಿ ಪೂಜೆ—ಶಂಖಾರಾಧನೆ ಶುರುಮಾಡಿದೆ."

"ಈ ಕಳ್ಳೆ ಗುಗ್ಗುರಿ—ತಂಬಿಟ್ಟಿನ ಚರುಪು ಮಾಡಿದ್ದರ ಐತಿಹ್ಯವೇನು?"

"ಅದು ನನ್ನ ಮಾವ ಮದುವೇಲಿ ಮಾಡಿದ ಮೋಜುವಾನಿಯ ನಿಶಾನಿ. ನನ್ನ ಬೇವರ್ಸಿಯ ಹಾಗೆ ಕಂಡ ಆ ಕಡುಪಾಪಿ ಮಾವನ ನೆನಪಿಗಾಗಿ ಮಾಡುವ ಪ್ರಸಾದ."

"ನಿಮ್ಮ ಮಾವ! ನಿಮಗೆ ಲಗ್ನವಾಯಿತೆ? ಮೀನಾಕ್ಷಿಯನ್ನಲ್ಲದೆ ಬೇರಾರನ್ನೂ ಆಗುವವರಲ್ಲ ನೀವು ಅಲ್ಲವೆ?"

"ಇನ್ಯಾತಕ್ಕೆ ಆ ಮೀನಾಕ್ಷಿ ಮಾತು. ಆ ಹಸನಾದ ಹೆಸರು ಬೇಳೆ ಕೊಸಂಬರಿಯಂತಹ ಸೊಗಸಿ ಎಲ್ಲಿ, ಈ ಹುಳಿತ ದಾಳಿಂಬೆಯ ಹಳಸಿದ ಹುಳಿ ತೊವ್ವೆಯಂತಹ ವೆಂಕಟಸುಬ್ಬಿ ಎಲ್ಲಿ...."

"ವೆಂಕಟಸುಬ್ಬಿ ಯಾರು?"

"ಅವಳೇ ನನ್ನ ಮಾವನ ಮುದ್ದು ಮಗಳು—ಮಾವನಾರು ಗೊತ್ತೆ?—ಆ ವಿದ್ವಾನ್ ದಾಮೋದರನೇ ನನ್ನ ಮಲ್ಲಿಗೆ ದಂಡೆಯ ಅಪ್ಪ...."

"ಹ್ಹಹ್ಹಹ್ಹ....ಚೆನ್ನಾಗಿದೆ. ಒಳ್ಳೆ ಬೆನ್ನು ಹತ್ತಿಬಿಟ್ಟನಲ್ಲ ಆತ. ಆಜನ್ಮ ಪರಿಯಂತ! ಅಂ...."

"ಇದೆಲ್ಲಾ ಮೊದಲೇ ಮಾಡಿಕೊಂಡ ಕೃತ್ರಿಮ....ನನಗೆ ಗೊತ್ತಾಗಲಿಲ್ಲ ಮೋಸಹೋಗಿಬಿಟ್ಟೆ ನೋಡಿ. ಒಂದೊಂದು ಸಂಗ್ತಿ ನೆನಪಿಗೆ ಬಂದರೂ ಆ

ದಾಮೋದರನ್ ನನಗೆ ಬೇಕಂತಲೇ ಸತಾಯಿಸಿದನೆಂದು ಈಗ ತೋರುತ್ತದೆ. ತುಂಬಿದ ಸಭೆ - ಮೈಸೂರು—ರಾಮನವಮಿ ಸೀಸನ್ನು; ಜನ ಕಿಕ್ಕಿರಿದಿದ್ದಾರೆ. ಭರ್ಜರಿಯ ಮೂರು ಘಂಟೆ ಕಚೇರಿ. ಒಂದೇ ಸಮ ತಂತಿ ಮೀಟಿ ಕೈನೋವು ಹತ್ತಿ ಸಾಯುತ್ತಿದ್ದ ನನಗೆ ಎಂತಹ ಅವಮಾನ ಮಾಡಿದ ಗೊತ್ತೆ! ಎಲ್ಲಾ ಮುಗಿದು ವಂದನಾರ್ಪಣೆ ಆಗಿಹೋಯ್ತು. ದುಂಡು ಮಲ್ಲಿಗೆ ಹಾರ ಖಂಜರಿ ಕಪ್ಪಣ್ಣನಿಂದ ದಾಮೋದರನ್‌ವರೆಗೂ ವಿದ್ವಾನ್ ವಿದ್ವಾನ್ ಎಂದೆನಿಸಿಕೊಂಡು ಹಾಕಿಸಿಕೊಂಡರು—ನನ್ನ ಪಾಲಿಗೆ ಒಂದು ವಂದನಾರ್ಪಣೆಯೂ ಇಲ್ಲ. ನನ್ನ ರೇಗಿದ ಮುಖ ನೋಡಿ ದಾಮೋದರನ್ ಇನ್ನು ನಾನು ತಂಬೂರಿ ಬಿಸುಡುವೆ ನೆಂದು ಹೆದರಿ ತನ್ನ ಹಾರ ತೆಗೆದು ಕಾರ್ಯದರ್ಶಿ ಕೈಗಿತ್ತು ಕಿವಿಯಲ್ಲಿ ಪಿಟಿಪಿಟಿ ಗುಟ್ಟಿದ. ಆಗಲೇ ಜನ ಚದುರಿತ್ತು. ಆ ಗಲಾಟೆಲೇ ಇದ್ದ ಹತ್ತು ಮಂದಿನ್ನ ಕರೆದು—'ಅಮೋಘವಾಗಿ ಮೂರು ಘಂಟೆ ಕಾಲ ಬಿಟ್ಟೊಬಿಡದೆ ಶೃತಿ ಹಿಡಿದ ವಿದ್ವಾನ್ ತಂಬೂರಿ ತಮ್ಮಯ್ಯನವರಿಗೆ ಈ ಅಲ್ಪಕಾಣಿಕೆ' ಎಂದು ಎಂಜಲು ಹಾರ ಹಾಕಿಸಬಹುದೇ ಆ ಮಾವ ದಾಮೋದರ....ಅಂ ನೀವೇ ಹೇಳಿ ಸಾರ್— ಸರಿ ಹೌದಲ್ಲೋ ನಾನು ಈ ಶಂಖಾರಾಧನೆ ಶುರುಮಾಡಿದ್ದು....''

''ಸರಿಯೆ !....ಬಹಳ ಅನ್ಯಾಯ ಮಾಡಿದ್ದಾನೆ ಆತ ಅಳಿಯನಿಗೆ....''

''ಪರಮ ಅನ್ಯಾಯಾನ್ನಿ. ಮೀನಾಕ್ಷಿಗೋಸ್ಕರ ಸಂಗೀತ ಕಲಿಯಲು ಬಂದು ಈ ವೆಂಕಟಸುಬ್ಬಿ ಕಾಲುಕಟ್ಟಬೇಕಾಯ್ತಲ್ಲ—ನೋಡಿ ಹೇಗಿದೆ ಗ್ರಹ ಚಾರ ಅವನ ಮಗಳಿಗೆ ಹೇಳಿದ ಹಾಗೆ ಕೇಳೋ ಗಂಡ ದೊರೆಯಬೇಕೂಂತ ಹನ್ನೆರಡು ವರ್ಷ ಈ ಹಸುಳೆ ಕೈಲಿ ಶೃತಿ ಹಿಡಿಸಿ ಮುದ್ದು ಮಾನವನನ್ನಾಗಿ ಮಾಡಿದನಲ್ಲಾ ಆ ದಾಮೋದರ—ಇದು ನ್ಯಾಯವೇ ಸಾರ್''

ತ್ಸೊತ್ಸೊ ...ಅದು ಸರಿ ...ಈಗ ಈ ಏಕಾದಶಿ ದಿನ ಈ ವ್ರತ ಮಾಡಿದರೆ ನಿಮಗೆ ಬಂದ ಭಾಗ್ಯವೇನು—ಈ ಹಾಳು ತಂಬೂರಿ ಪೂಜೆಮಾಡಿ ಪ್ರಯೋಜನ ವೇನು ತಮ್ಮಯ್ಯನೋರೇ .. ಅಂ....''

''ವೆಂಕಟಸುಬ್ಬಿಹೊಟ್ಟೆ ಉರಿಸೋಕೆ ಈ ವ್ರತ. ನಿಮ್ಮಪ್ಪನಿಂದ ನನಗೆ ಏಕಾದಶಿಯೇ ಗತಿಯಾಯ್ತು, ಶಂಖವಾದ್ಯವೇ ಗತಿಯಾಯ್ತು....ಮದುವೇಲಿ ಅಳಿ ಯನಿಗೆ ಉಪಚಾರ ಮಾಡಿ ಫಲಹಾರಕ್ಕೆ ಕಳ್ಳೆ ಗುಗ್ಗರಿ—ತಂಬಿಟ್ಟು—ಪುಳ್ಳಂ ಗಾಯಿ ಉಂಡೆ ನನ್ನ ಬಿದ್ದ ಹಲ್ಲು ನೋಡಿ ನೋಡಿ ಕೊಟ್ಟನಲ್ಲಾ ಆ ದಾಮೋ ದರ ಆ ಸೇಡು ತೀರ್ಸ್ಕೋಕೆ ಈ ಆಚರಣೆ ರಾಯರೆ—ಮತ್ತೇನೂ ಅಲ್ಲ. ಸೊಸೆಗೂ ಒಂದು ಕಾಲ ಬರುತ್ತೆನ್ನಿ. ಆ ದಾಮೋದರನ್ನ ಈಗ ಯಾರು ಕರೀತಾರೆ ಕಚೇರಿಗೆ...ಗಂಟಲೇ ಹೂತು ಹೋದ ಹೋತನಹಾಗೆ ಹಾಡುತ್ತಾನೆ ಆ

ದಾಮೋದರ— ಅದಕ್ಕಿಂತ ನನ್ನ ತಂಬೂರಿ ಕಚೇರಿಯೇ ಮೇಲೆಂದು ಜನ ಅಂದದ್ದುಂಟು. ನೋಡಿ ಈಗ ಎಂಟು ಪಾಠ ಇವೆ.

''ಪಾಠ ಯಾತರದ್ದು''

''ಅದೇ ತಂಬೂರಿ ಪಾಠ—ಎಂಟು ಗಂಟುಬಿದ್ದಿವೆ. ಹ್ಯಾಗೋ ದೇವರು ನಡಸ್ತಾನೇನ್ನಿ—ಆ ದಾಮೋದರ ಅಳಿಯಾನ್ನೊ ಅಭಿಮಾನವಿಲ್ಲದೆ ನನ್ನ ಹಾಳುಮಾಡೋಕೆ ನೋಡಿದ—ಆದರೇ '' ಎಂದವ ಇದ್ದಕ್ಕಿದ್ದ ಹಾಗೇ ಸುಮ್ಮನಾಗಿಬಿಟ್ಟ ತಮ್ಮಯ್ಯ. ಕಳೆಯೇ ಬದಲಿಸಿತು— ಮೋರೆ ಕಪ್ಪಿಟ್ಟಿತು. ಕಾರಣ ಹೊರಕ್ಕೆ ಹೋಗಿದ್ದ ವೆಂಕಟಸುಬ್ಬಮ್ಮ ಬಂದರು. ಈ ಪೂಜೆ ಈ ಪೂಜಾರಿ ಈ ಪ್ರಸಾದ ನೋಡಿ ಕೆಂಡವಾದರು ನನ್ನ ಸ್ಥಿತಿ ಬಹಳ ಕಷ್ಟಕ್ಕಿಟ್ಟುಕೊಂಡಿತು. ಕೈಲಿದ್ದ ಛತ್ರಿ ಮೂಲೆಗೆ ಇಟ್ಟು. ದುರದುರನೆ ತಮ್ಮಯ್ಯ ನನ್ನನ್ನು ನೋಡಿದರು. ನಾನು....''ಅವರೇ ಕರೆದಿದ್ದರು .. ಪೂಜೆ ಅಂತ'' ಎಂದು ಅಪರಾಧಿಯಂತೆ ಏನೋ ತೊದಲಿದೆ ಊಸ್ಸಪ್ಪ! ಎಂದು ಗೋಡೆಗೊರಗಿ ಕುಳಿತರು. ನಾನು ಹೊರಡುವುದು ಮೇಲೆಂದು ಎದ್ದು ನಿಂತು ''ಬರ್‍ತೀನೆ ತಮ್ಮಯ್ಯ, ಬರ್‍ತೆನಮ್ಮ....'' ಎಂದು ಹೊರಡಲನುವಾದೆ

"ಕೂಡಿ ಹೋಗಿವಿರಂತೆ" ಎಂದು ಆಕೆ ಚೀಲದಿಂದ ಒಂದು ಕೊಡಗಿನ ಕಿತ್ತಲೆ ತೆಗೆದು ಮುಂದಿಸದಳು.

"ಎಲ್ಲಾ ಕಥೆ ಹೇಳಿದರು ತಾನೆ! ಸಂಗೀತ ಸಂಗೀತಾಂತ ತಲೆಚಚ್ಚಿಕೊಳ್ಳುತ್ತಾರಷ್ಟೆ. ಇವರಿಗೆ ಕೊಂಚವೂ ಸ್ವರಜ್ಞಾನವಿಲ್ಲ ಶುದ್ಧ ಅಪಶೃತಿ ವಂತರು. ನಮ್ಮಪ್ಪ ನನ್ನ ಕೊಟ್ಟು ಇವರನ್ನ ಒಬ್ಬ ಮನುಷ್ಯಾಂತ ಮಾಡಿದರು—ಇವರಿಗೆ ದಕ್ಕಿದ ವಿದ್ಯೆ ಎಂದರೆ ತಂಬೂರಿ ಮೀಟುವುದು ಮಾತ್ರ. ಆದರೂ ಸಂಸಾರ ಗುಟ್ಟು ಅವರು ಹೇಳಿದರೂಂತ ನಾನು ಹೇಳಬಾರದು. ಪ್ರತಿ ಏಕಾದಶಿ ದಿನ ಈ ತಂಬೂರಿ ವ್ರತ ಶಂಖಾರಾಧನೆ ಮಾಡಿ ನನ್ನ ಕಾಡಿಸುತ್ತಾರೆ ನೋಡಿ. ನಿಜಕ್ಕೂ ಇವರು ಏಕಾದಶಿ ಮಾಡುತ್ತಾರೆಯೇ... ನಾನು ಮೋಡಮ್ಮನಾಗಿ ಇವರಿಗೆ ಅನ್ನ ಕಾಣಿಸುತ್ತಿಲ್ಲವೆ? ಮತ್ತೇಕೆ ಇವರು ಈ ರೀತಿ ಕುಕ್ಕಬೇಕು"....ಎಂದು ಸಮಸ್ಯೆ ಬಿಡಿಸಿದರು. ವಿದ್ವಾನ್ ತಂಬೂರಿ ತಮ್ಮಯ್ಯನವರು ಒಂದು ಮಾತೂ ಆಡಲಿಲ್ಲ. ಆದರೆ ಕಿತ್ತಲೆ ಮಾತ್ರ ಸುಲಿಯತೊಡಗಿದ್ದರು.

"ಇನ್ಯಾವಾಗಲಾದರೂ ಪುರುಸೊತ್ತಾದಾಗ ಬರುತ್ತೇನೆ" ಎಂದು ಹೊರಬಿದ್ದಾಗ ಅಪರಾಧಿಯಂತೆ ತಲೆ ತಗ್ಗಿಸಿದ್ದರಲ್ಲದೆ ಹೊರತನಕ ನನ್ನ ಕಳಿಸಿ ಬರಲಿಲ್ಲ. ಆಳವಾಗಿ ಆ ತಂಬೂರಿ ನೋಡುತ್ತಿದ್ದರು. ವಿದ್ವಾನ್ ತಂಬೂರಿ ತಮ್ಮಯ್ಯನವರು. "ಮುಂದಿನ ಏಕಾದಶಿಗೆ ಮತ್ತೆ ಬರಲು ಮರೆಯಬೇಡಿ" ಎಂದು ಅಂದದ್ದು ತಂಬೂರಿ ನಾದದಂತೆ ಹೊರಬಿತ್ತು. ನಾನೂ ಹೊರಬಿದ್ದೆ.

—ದಾಶರಥಿ ದೀಕ್ಷಿತ್.

# ಸಂಪಾದಕನ ಸಂಭಾವನೆ

"ಹ. ಸು"

ಸಂಪಾದಕರು ಸತ್ಯವಂತರು ಅಂದುಕೊಂಡಿದ್ದೆ. ಅವರು ಈ ತರದ ಸಂಪಾದನೆಗೆ ಹೊರಟಿದ್ದಾರೆ ಅನ್ನುವುದು ನನಗೆ ಮೊನ್ನೆವರೆಗೆ ತಿಳಿದಿರಲಿಲ್ಲ.

"ಸ್ವೀಕೃತವಾದ ಲೇಖನಗಳಿಗೆ ಉಚಿತವಾದ ಸಂಭಾವನೆ" ಅನ್ನೋದನ್ನ ನೋಡಿ, ನಾನೂ ಒಂದು ಲೇಖನ ಕಳಿಸಿಕೊಟ್ಟೆ. ಪದ್ಯವಾದರೆ ತಾನೆ ಏನಂತೆ, ಅದೇನು ಲೇಖನವಲ್ಲವೇ ಅಂತ. ಅದು ಸ್ವೀಕೃತವೂ ಆಯಿತು. ಅಚ್ಚಿನಲ್ಲೂ ಅದನ್ನ ಚಚ್ಚಿದರು. ತಿಂಗಳು ಒಂದಾಯಿತು, ಎರಡಾಯಿತು......ಮಾಡಿದ್ದರೆ ಬಳೆತೊಡಿಸುವ, ಹೂ ಮುಡಿಸುವ ಅದನ್ನೆಲ್ಲಾ ಮಾಡಬಹುದಾಗಿತ್ತು.... ಆದರೆ ಮೂರನೇ ತಿಂಗಳೇ ಸಂಪಾದಕರಿಗೆ ಒಂದು ಕಾಗದ ಬರೆದೆ, ಸಂಭಾವನೆ ಕಳಿಸಿ ಅಂತ.

ಅದಕ್ಕೆ ಅವರು ಏನು ಬರೆದರು ಗೊತ್ತೆ? ಇದು ಬರೆದರು!

ಸ್ವಾಮಿ,

ನಿಮ್ಮ ಕವನಕ್ಕೆ 'ಸಂಪಾದಕರ ಸಂಭಾವನೆ' ಹೀಗಾಗುತ್ತದೆ :

| | ರೂ. | ಆ. | ಕಾ. |
|---|---|---|---|
| ೧) ಪಂಕ್ತಿ ೧, ೫, ೮, ೧೩ ಇವುಗಳನ್ನು ಕಾಲು ಇಂಚು ಒಳಗೆ ತಳ್ಳಿದ್ದಕ್ಕೆ | ೦ | ೬ | ೦ |
| ೨) ೩, ೪, ೧೧ ಇವುಗಳನ್ನು $\frac{1}{8}$ ಇಂಚು ಹೊರಗೆಳೆದದ್ದಕ್ಕೆ | ೦ | ೩ | ೯ |
| ೩) ಪದ್ಯದಲ್ಲಿ ೧೫ ಕಡೆ ಸಂಧಿ ಸಡಿಲಮಾಡಿದ್ದಕ್ಕೆ | ೦ | ೧೫ | ೦ |
| ೪) ಅದರಲ್ಲೇ ೮ ಕಡೆ ಸಮಾಸಗಳಿಗೆ ಬೆಸುಗೆ ಹಾಕಿದ್ದು | ೧ | ೪ | ೦ |
| ೫) ಮೂರುಕಡೆ ಯಮಕ, ಐದು ಕಡೆ ಶ್ಲೇಷೆ, ಒಂದು ಕಡೆ ವಿರೋಧಾಭಾಸ ಇವುಗಳನ್ನು ಒದಗಿಸಿದ್ದು | ೨ | ೪ | ೦ |

೬) ಎರಡು ಕಾಜಾಣ, ಒಂದು ಕಾಡುಕೋಣ, ಮೂರು
ಮುಳ್ಳುಹಂದಿಗಳನ್ನು ಸಮಯೋಚಿತವಾಗಿ ತಂದು
ಆಡಿಸಿರುವುದಕ್ಕೆ ೫ ೧೦ ೩

೭) ಪದ್ಯದ ಹೆಸರಿಗೆ ಹೊಸದಾಗಿ ಸಾಣೆ ಹಿಡಿಸಿದ್ದು ೨ ೩ ೦

ಜುಮ್ಲಾ ೧೨ ೧೩ ೦

ದಯಮಾಡಿ ಈ ಸಂಭಾವನೆಯನ್ನು ಆದಷ್ಟು ಶೀಘ್ರ ಕಳಿಸಿಕೊಡಿ. ನಿಮ್ಮ ಇತರ ಕೃತಿಗಳನ್ನೂ ಹೀಗೆಯೇ ಕಳಿಸಿ ಪ್ರೋತ್ಸಾಹಿಸಿ. ಒಟ್ಟಿಗೆ ಹತ್ತು ಕೃತಿಗಳಿಗೆ ಮೇಲ್ಪಟ್ಟು ಕಳಿಸಿದರೆ, ಶೇಕಡಾ ಇಪ್ಪತ್ತರಂತೆ ದಳ್ಳಾಳಿ. ವಿಶ್ವಾಸವಿರಲಿ.

ಇತಿ, ನಿಮ್ಮ, ಇತ್ಯಾದಿ.

ಸಂಪಾದಕರು ಸತ್ಯವಂತರು ಅಂದುಕೊಂಡಿದ್ದೆ. ಅವರು ಈ ತರದ ಸಂಪಾದನೆಗೆ ಹೊರಟಿದ್ದಾರೆ ಅನ್ನುವುದು ನನಗೆ ಮೊನ್ನೆವರೆಗೆ ತಿಳಿದಿರಲಿಲ್ಲ.



ಚಿನ್ನದ ಗಣೀ! ಚಿನ್ನದ ಗಣೀ! ಅಂತ ಕೇಳಿದ್ದೀರಾ!
ಅಲ್ಲಿ ಕಲ್ಲಿಂದ ಚಿನ್ನ ತೆಗೀತಾರಂತೆ.
ಆದರೆ ತೆಗೆದವರಿಗೆ ಸಂಬಳ ಹೇಗೆ ಗೊತ್ತೆ.
ಬರೀ ಕಾಗದದ ಹಣವೇ ಅಂತೇ.

* * *

ಜ|| ಮೆಕಾರ್ಥರ್ ಅವರು ಯೂನೋದ ಸೈನಿಕ ದಳಾಧಿಪತಿ. ಯೂನೋದವರು ಕೊಟ್ಟ ಅಪ್ಪಣೆ ನಿರ್ವಹಿಸಬೇಕು.

ಈಗ ಆತ ರಾಜಕೀಯ ಹೇಳಿಕೆಗಳನ್ನು ಕೊಡುತ್ತಿದ್ದಾನಂತೆ
—ಅಂದರೆ ತೋಳ ಕುರಿಕಾಯುಕ್ಕೆ ನೇಮಕವಾದಂತೇ ಅಲ್ಲವೇ?

* * *

# ನೀತಿಯ ಕತೆಗಳು (೨)

(ಬಲಿತವರಿಗೆ)

ಕಾಡಿನಾಚೆ ಹಳ್ಳಿಯಲ್ಲಿ ಒಬ್ಬ ಬೇಡ ತನ್ನ ಹೆಂಡತಿ ಮಗುವಿನೊಡನೆ ವಾಸವಾಗಿದ್ದನಂತೆ. ಬೆಳಗಿನ ಝಾವ, ಪ್ರಾಣಿಗಳೆಲ್ಲಾ ನೀರು ಕುಡಿಯೋ ಹೊತ್ತಿನಲ್ಲಿ ಕಾಡಿಗೆ ಬೇಟೆಗೆ ಹೋಗಿ ಅದದ್ದು ಶಿಕಾರಿಮಾಡಿ ಮನೆಗೆ ಬರುತ್ತಿದ್ದನಂತೆ. ಅವನ ಹೆಂಡತೀನೂ ಕಾಡಿಗೆ ಹೋಗಿ ಸೌದೆ ತರುತ್ತಿದ್ದಳಂತೆ. ಮಗೂನ ಮನೆ ನಾಯಿ ನೋಡಿಕೋತಿತ್ತಂತೆ ಒಂದು ದಿನ ಘಟಸರ್ಪ ಬಂತಂತೆ. ಮನೆ ಹತ್ತಿರ ಅದನ್ನ ನಾಯಿ ಕೊಂದಿತಂತೆ. ಬೇಡ ಮನೆಗೆ ಬಂದು ಹಾವಿನ ಹೆಣ ನೋಡಿ, ಭಲೆ! ಭೇಷ್! ನನ್ನ ವಂಶವನ್ನೇ ಕಾಪಾಡಿದೆ ನಾಯಿ! ಅಂತ ಹೊಗಳಿ; ಅಷ್ಟು ಹೊತ್ತಿಗೆ ಹೊರೆ ಹೊತ್ತುಕೊಂಡು ಹೆಂಡತಿ ಬಂದಾಗ ಅವಳಿಗಿದೆಲ್ಲಾ ಹೇಳಿ, ಮೂರು ದೊಡ್ಡ ಚೂರು ಮಾಂಸ ಮತ್ತು ಮೂಳೇನ ಬಹುಮಾನ ಕೊಟ್ಟನಂತೆ ನಾಯಿಗೆ—

ಇದಾದ ಮೇಲೆ ಆರು ತಿಂಗಳಾಯ್ತು. ಮಗು ಕೆಮ್ಮಕ್ಕೆ ಶುರು ಮಾಡ್ತು. ಆಕೆ ಹೊಂಗೇಕಾಯಿ ಕುತ್ತಿಗೆಗೆ ಕಟ್ಟಿದಳು. ತುಳಸಿರಸ ಹಿಂಡಿದಳು. ಮಾರೀಗೆ ಒಂದು ಕೋಳಿ ಬಲಿ ಕೊಟ್ಟು ಅದನ್ನು ಉಂಡರು ದಿನದಿನಕ್ಕೆ ಕೆಮ್ಮು ಹೆಚ್ಚಾಯ್ತು. ಅವಳು ಅಂದಳು ಅವನಿಗೆ—ಮಗೂನ ಡಾಕ್ಟರಿಗೆ ತೋರಿಸೋಣ ಅಂತ. ಸರಿ! ಇಬ್ಬರೂ ಆರೇ ಮೈಲಿ ದವಾಖಾನೆಗೆ ಮಗೂನ ಎತ್ತಿಕೊಂಡು ಹೊರಟರು. ಮನೆ ಕಾಯುಕ್ಕೆ ಅಂತ ನಾಯಿನ ಅಲ್ಲೇ ಬಿಟ್ಟರು.

ಡಾಕ್ಟರಂದನಂತೆ ಮಗೂಗೆ ನಾಯಿಕೆಮ್ಮು ಅಂತ. ಇದ್ದ ಪುಡಿಗಾಸು ಇಸುಕೊಂಡು, ಇದ್ದ ಪುಡಿ ಕೊಟ್ಟು ಕಳಿಸಿದನಂತೆ. ಮನೆಗೆ ಬರುವಾಗ ಅವಳಂದಳಂತೆ ಮಗೂಗೆ ನಾಯಿಕೆಮ್ಮು ಹೇಗೆ ಬಂತ್ಲಾ. ನಮ್ಮ ನಾಯಿಂದಾನೇ ಇರಬೇಕು ಅಂತ, ಅವನೂ "ಇರಬೇಕು! ಮಗೂಗೆ ಖಾಯಿಲೆ ಹೇಗೆ ವಾಶಿಯಾಗುತ್ತೆ, ಆ ನಾಯಿರೋತನಕ" ಅಂತ ಅಂದನಂತೆ.

ಮನೇಗೆ ಬರೋಹೊತ್ತಿಗೆ ನಾಯಿ ಬಾಲ ಆಡಿಸಿಕೊಂಡು ಮುಂದೆ ಬಂದಂತೆ ಬೇಡ ಅದರ ಕುತ್ತಿಗೆಗೆ ಒಂದೇ ಪೆಟ್ಟು ಹಾಕಿದನಂತೆ ನೋವಿಲ್ಲದೆ ಕುಯಿಗುಟ್ಟದೆ ಅದು ದತ್ತಾತ್ರೇಯನ ಪಾದ ಸೇರ್ತಂತೆ. ಅಲ್ಲಿ ಹೇಳ್ತಂತೆ ದತ್ತಾತ್ರೇಯನಿಗೆ 'ಗುರುವೇ! ಆ ಹಾವು ನೋಡಿ ನಾನು ಓಡಿಹೋಗಿದ್ದರೆ, ಮಗು ಹೋಗ್ತಿತ್ತು ನಾನಿರುತ್ತಿದ್ದೆ. ಈ ಅಜ್ಞಾನಿಗಳಿಗೆ ಸಹಾಯ ಏನೋ ಮಾಡುಕ್ಹೋಗಿ ನಾನು ಪ್ರಾಣತೆತ್ತೆ, ಅಂತ.

**ನೀತಿ :—ತಲೆಯಿಲ್ಲದವರ ಸಹಾಯಕ್ಕೆ ಹೋದರೆ ತಲೆಯೇ ಹೋಗುತ್ತೆ.**




ಅಪ್ಪಾ ! ಈ ಬೊಂಬೇಗೆ ಅಲಂಕಾರ ಮಾಡ್ತೀನಪ್ಪ
ನೀನು ಹೊಲಿಸಿಕೋತೀಯಲ್ಲ ! ಅಂತಹ ಅಂದವಾದ

## ಟಿ. ಆರ್. ಮಿಲ್ಸ್ ಸೂಟಿಂಗ್ ಮತ್ತು ಷರ್ಟಿಂಗ್

ಬಟ್ಟೆಗಳನ್ನು ತಂದುಕೊಡಪ್ಪಾ !

ಚೆನ್ನಾಗಿ ಬೊಂಬೇಗೆ ಬಟ್ಟೆ ಉಡಿಸ್ತೀನಿ,

ಪಕ್ಕದ್ಮನೆ ಲಲಿತು ನೋಡಿ— ಬಾಯ್ಬಿಡೋಹಾಗೆ ಆಗಬೇಕು !



: ಪ್ರಚುರಪಡಿಸಿದವರು :

# ಟಿ. ಆರ್. ಮಿಲ್ಸ್

**ಚಾಮರಾಜಪೇಟೆ, : : ಬೆಂಗಳೂರು.**

K.A S.

# ಕಲಿತಪಾಠ-ಅಥವಾ-ಶಾಲಾಸೇವೆ

ಮಹಾಸ್ವಾಮಿ !

ನನ್ನ ಅನುಭವ ಮತ್ತು ಕಲಿತ ಪಾಠವನ್ನು ತಮ್ಮ ಅವಗಾಹನೆಗೆ ತರಲು ಅವಕಾಶ ಬೇಡುತ್ತೇನೆ ಹಾಗೂ ತಾವು ಒಂದು ಚಾಕರಿ ಕೊಟ್ಟರೆ ನಾನು ಕಲಿತ ವಿದ್ಯೆ ಕಾರ್ಯರೂಪಕ್ಕೆ ತರಲು ಅನುಕೂಲ.

ಎಲ್ಲ ಮಾಸ್ತರುಗಳ ಹಾಗೂ ಹೆಚ್ಚಾಗಿ ಹೆಡ್‌ಮಾಸ್ತರ ಪ್ರೀತಿಗೆ ಪಾತ್ರನಾಗಿದ್ದೇನೆ. ಅವರು ಯಾವ ಕೆಲಸಗಳನ್ನು ಹೇಳಿದರೂ ನಿಷ್ಠೆಯಿಂದ ಶ್ರದ್ಧೆಯಿಂದ ನಿರ್ವಹಿಸುತ್ತೇನೆ. "ನಿನ್ನ ಸೈಕಲ್ ತೆಗೆದುಕೊಂಡು ಬ್ಯಾಂಕಿಗೆ, ಟ್ರೆಜರೀಗೆ ಹೋಗಿ ಚಕ್ ಮುರಿಸಿ ಹಣ ತೆಗೆದುಕೊಂಡು ಬಾ" ಅಂತ ನನ್ನೊಬ್ಬನಿಗೇ ಹೇಳುತ್ತಾರೆ ಅಷ್ಟು ವಿಶ್ವಾಸ ಗಳಿಸಿದ್ದೇನೆ. ಶಾಲೆಯ ಜಯಂತ್ಯುತ್ಸವಗಳು, ವಾರ್ಷಿಕಗಳು, ಇಂತಹವುಗಳೆಲ್ಲಾ ಚಂದಾಪಟ್ಟಿಯನ್ನು ಹಿಡಿದು ಓಡಾಡುವವನು ನಾನೇ. ಹಣ ವಸೂಲಿ ಆದ ಮೇಲೆ, ತಿಂಡಿ ತಿನಸುಗಳನ್ನು ತಯಾರಿಸಿ, ಸಮವಾಗಿ ಹಂಚಿ, ತದನಂತರ ನಿರ್ಮಲೀಕರಣವನ್ನು ನಾನೇ ಎಷ್ಟೋ ಬಾರಿ ಮಾಡಿದ್ದೇನೆ. ಅಂಚೆ ಆಫೀಸಿಗೆ ಹೆಡ್‌ಮಾಸ್ತರು ಕಳಿಸುವ ತರಿಸುವ ಕಾಗದ ಇತ್ಯಾದಿಗಳೆಲ್ಲಕ್ಕೂ ನಾನೇ ಅವರ ಪರ ಸಿ. ಐ. ಡಿ. ಜೋಹುಕುಂದಾರ. ಕ್ರೀಡೆಗಳಲ್ಲಿ, ಎತ್ತರದ ಹಾರಾಟ, ಉದ್ದನೆಯ ನೆಗೆದಾಟ, ಪೆಟ್ಟಿಗೆಯಾಟ ಇವುಗಳಲ್ಲಿ ಮೊದಲಿಗನಾಗಿದ್ದೆ ಎಷ್ಟೋ ವರ್ಷ. ಪರೀಕ್ಷೆಗಳಲ್ಲಿ ಸ್ವಲ್ಪ ಹಿಂದಾದರೂ, ಮಾಸ್ತರುಗಳು ನನ್ನ ವರ್ಷಾದ್ಯಂತದ ಚಟುವಟಿಕೆ ಕಂಡು ಮುಂದಕ್ಕೆ ಪ್ರಯಾಸಪಟ್ಟು ದಬ್ಬಿದ್ದಾರೆ—ಎಲ್ಲರೂ ಸೇರಿ—ಶಾಲಾ ಕಛೇರಿಯಲ್ಲಿ ಗುಮಾಸ್ತನಿಗೆ ಸಹಾಯಕನಾಗಿದ್ದೇನೆ. ಶಾಲಾ ಸೊಸೈಟೀಲಿ ಮಾರಾಟ ಮಾಡಿದ್ದೇನೆ.

ತಾವು ಈ ನನ್ನ ಶಾಲಾ ಸಾಮಾಜಿಕ ಸೇವೆ ಅನುಭವಗಳನ್ನು ಮನಸ್ಸಿಗೆ ತಂದುಕೊಂಡು ಯಾವುದಾದರೂ ಜವಾಬ್ದಾರಿಯುತವಾದ ನನ್ನ ಗುಣಗಳನ್ನು ಹೊರಸೂಸುವಂತೆ ಅನುಕೂಲವಿರುವ, ಪ್ರಧಾನ ಕಾರ್ಯದರ್ಶಿ, ಆತ್ಮೀಯ ಸೆಕ್ರಿಟರಿ ಇಂತಹ ಕೆಲಸಗಳನ್ನು ಕೊಡಿಸಬೇಕೆಂದು ವಿನಯದಿಂದ ಕೇಳಿಕೊಳ್ಳುತ್ತೇನೆ.

ಇತಿ ನಿಮ್ಮ ಸೇವಾಕಾಂಕ್ಷಿ,

ಬೆಣ್ಣೆ ಸುಬ್ಬರಾಯ.



# ಒಳ್ಳೆಯ ತಳಹದಿ

## ಮೇಲ್ಮಟ್ಟಕ್ಕಿಂತ ಬಹಳ ಆಳ ಕೆಳಗಿರುವುದು

ಎಲ್ಲಾ ದೀರ್ಘಕಾಲ ಬಾಳುವ ಕಟ್ಟಡಗಳಿರುವಂತೆಯೇ ಪ್ರತಿಯೊಂದು ಬಲವಾದ ಸಂಸ್ಥೆಗೂ, ಸಾಮಾನ್ಯವಾದ ಮೇಲ್ಮಟ್ಟಕ್ಕಿಂತಲೂ ಹೆಚ್ಚು ಬಲವಾದ ರಕ್ಷಣೆಯೊಂದಿದೆ. ಮೇಲ್ಮಟ್ಟದ ಕೆಳಗೆ ಬಹಳ ಆಳದವರೆಗೂ ಹೋಗಿರುವ ತಳಹದಿಯೊಂದಿರುವುದು. **ಮೈಸೂರು ಸರ್ಕಾದ ಜೀವ ವಿಮೆ** ಇಲಾಖೆಯಲ್ಲಿ, ಅತಿಶಯವಾದ ಉತ್ಪತ್ತಿ. ಕಾರ್ಯವಿಚಕ್ಷಣತೆಯಲ್ಲಿ ಅರಿತ ನುರಿತ ಶ್ರದ್ಧಾಳುಗಳ ಸಾಮರ್ಥ್ಯ, ಮತ್ತು ಸಂಪೂರ್ಣ ನಂಬಿಕೆಯಾದ ಸಂರಕ್ಷಣೆ ಇವು ಮುಖ್ಯವಾದ ತಳಹದಿಯ ಭಾಗಗಳು.

**ಹೆಚ್ಚಿನ ವಿವರಗಳಿಗೆ ಈ ಕೆಳಗಿನ ವಿಳಾಸಕ್ಕೆ ಬರೆಯಿರಿ:—**

**ಮೈಸೂರು ಸರ್ಕಾರದ ವಿಮಾ ಇಲಾಖೆ, ಬೆಂಗಳೂರು**

# ಸರಸ್ವತಿ ಅನುಗ್ರಹ

ಈ ವರ್ಷ ಎಸ್ಸೆಸ್ಸೆಲ್ಸಿಗೆ ಹೋದ ಹುಡುಗರಮೇಲೆ ಸರಸ್ವತಿ ಅನುಗ್ರಹ ವಿಪರೀತವಾಗಿತ್ತು ಎನ್ನುವುದಕ್ಕೆ ಕರೆಕ್ಷನ್‌ಗೆ ಮ್ಯಾಥೆಮಾಟಿಕ್ಸ್ ಪೇಪರ್ ರಾಯರಿಗೆ ಬಂದುದೇ ನಿದರ್ಶನ.

ರಾಯರು ಸ್ವಲ್ಪ ಸಿರಿವಂತ ಮನೆತನಕ್ಕೆ ಸೇರಿದವರು: ಕೂಡಿ, ಗುಣಿಸಿಯೇ ಹೆಚ್ಚು ಅಭ್ಯಾಸ. ಕಳೆದು, ಭಾಗಿಸುವುದರ ಪ್ರಮೇಯವೇ ಕಡಿಮೆ.

ರಾಯರು ಕೂಡಿದ್ದನ್ನೆಲ್ಲಾ ಅವರ ಮಕ್ಕಳು ಕಳೆಯುತ್ತಿದ್ದರು. ರಾಯರು ತಮ್ಮದೆಂದು ಗುಣಿಸಿದ್ದನ್ನೆಲ್ಲಾ ಅವರ ತಮ್ಮ ಭಾಗಿಸುತ್ತಿದ್ದರು.

ಹನ್ನೆರಡನ್ನು ಆರರಿಂದ ಗುಣಿಸಿದರೆ ಎಪ್ಪತ್ತೆರಡಾದರೆ, ಎಪ್ಪತ್ತೆರಡನ್ನು ಆರರಿಂದ ಭಾಗಿಸಿದರೆ, ನಿಜವಾಗಿಯೂ ಹನ್ನೆರಡೇ?; ಹನ್ನೆರಡಕ್ಕೆ ನಾಲ್ಕು ಕೂಡಿದರೆ ಹದಿನಾರಾದರೆ, ಹದಿನಾರಲ್ಲಿ ನಾಲ್ಕು ಕಳೆದರೂ ಹನ್ನೆರಡೇ?; ಇತ್ಯಾದಿ, ಕೇವಲ ಹಸುಳೆ ಗಣಿತ, ಅವರನ್ನು ಪೀಡಿಸಿ, ಪ್ರಾಣ ಹಿಂಡುತ್ತಿತ್ತು.

ರಾಯರು ತಲೆ ಕೆರೆದು ಹುಣ್ಣುಮಾಡಿಕೊಂಡು ವಾಸಲ್ಯೆನ್ ಹಚ್ಚುತ್ತಿದ್ದರು. ಅನ್ಯೋನ್ಯವಾಗಿದ್ದ, ಕುಳಿತ ಕುರ್ಚಿಯೂ, ಅವರೂ ಅನ್ಯ ಅನ್ಯವಾಗಬೇಕಾದರೆ ಬಹಳ ಪ್ರಯಾಸಪಡಬೇಕಾಗಿತ್ತು.

....ಮೇಲಿಂದ ಕೆಳಕ್ಕೆ ಕೂಡಿದರು. ಕೆಳಗಿಂದ ಮೇಲಕ್ಕೆ ಕಳೆದರು. ಕಳೆದುದನ್ನು ಕೂಡಿದ್ದರಿಂದ ಗುಣಿಸಿದರು. ಕೂಡಿದ್ದನ್ನು ಕಳೆದುದರಿಂದ ಭಾಗಿಸಿದರು....

ಹುಡುಗ ತಪ್ಪುಮಾಡಿದ್ದಾನೆ ಎಂದು ಹೇಗೆ ಹೇಳುವುದು? ಮನುಷ್ಯ, ದೊಡ್ಡವನಾದಮಾತ್ರಕ್ಕೆ ತಪ್ಪುಮಾಡುವುದೇ ಇಲ್ಲವೇ? ದೊಡ್ಡವರು ಮಾಡಿದ್ದೆಲ್ಲಾ ಸರಿ ಎಂದು ಹೇಗೆ ಸರಿಯಾಗಿ ಹೇಳುವುದು? ತಾವು ಮಾಡಿ ತಂದಿಟ್ಟ ಉತ್ತರವೇ ಏಕೆ ತಪ್ಪಾಗಬಾರದು? ಹುಡುಗ ಮಾಡಿದ್ದೇ ಏಕೆ ಸರಿಯಾಗಿ ಇರಬಾರದು?........

ಅದಕ್ಕಾಗಿಯೇ ಅವರು ಅಷ್ಟೆಲ್ಲಾ ಶ್ರಮಪಟ್ಟುದು? ತಮ್ಮ ತಾಳ್ಮೆಯನ್ನು ಆ ಹುಡುಗರ ಹಾಳೆಗೆ ನೋಡಿ ಜೋಡಿಸಿದುದು!!!

ಆ ವರ್ಷ, ಈ ವರ್ಷ ಮ್ಯಾಥೆಮಾಟಿಕ್ಸ್‌ನಲ್ಲಿ ಫೈಲು ಎಂದವರೆಲ್ಲಾ ಪಾಸಾದರು; ಪಾಸು ಎಂದವರೆಲ್ಲಾ ಫಸ್ಟ್‌ಕ್ಲಾಸಿನಲ್ಲಿ ಬಂದರು; ಫಸ್ಟ್‌ಕ್ಲಾಸ್ ಪ್ರಯಾಣ ಎಂದವರೆಲ್ಲಾ ಸೆಂಟಿಗೆ ಪರ್‌ಸೆಂಟ್ ಹಾಕಿದರು; ಸೆಂಟ್ ಪರ್ ಸೆಂಟ್ ಬರುತ್ತೆ ಎಂದವರು ಸರಸ್ವತಿ ಸನ್ನಿಧಾನಕ್ಕೆ ನೇರವಾಗಿ........?!??!

—ಗೋಡಂಬಿ.

# ರೂ. ೫೦ನ್ನು ಪಡೆಯಲು ಒಂದು ವಿಧಾನ

ಈ ಹಂಚಿಕೆಯ ಜಾಹೀರಾತುಗಳನ್ನು ಓದಿ, ನಿಮ್ಮ ಮನಸ್ಸಿಗೆ ಬಲು ಚೆನ್ನು ಅಂದುದನ್ನು ನಂ. ೧ರ ಎದುರಿಗೂ ಹಾಗೆಯೇ ನಿಮ್ಮ ಮೆಚ್ಚುಗೆಯ ರೀತಿ ಈ ಪಟ್ಟಿಯನ್ನು ಪೂರ್ಣಗೊಳಿಸಿ ಮೇ ೧೦ ನೇ ತಾರೀಖಿನೊಳಗೆ ನಮಗೆ ಕಳಿಸಿ. ಸಂಪಾದಕ ಸಮಿತಿಯ ಅಭಿಪ್ರಾಯದಲ್ಲಿ "ಸರಿ" ಎಂದೆನಿಸಿಕೊಂಡವರಿಗೆ ಜೂನ್ ೧ನೇ ತಾರೀಖಿನೊಳಗೆ ಈ ೫೦ ರೂ. ಉಡುಗೊರೆ ಕೊಡುವೆವು.

| | | |
|---|---|---|
| ೧........ | ೧೫........ | ೨೮ .. .... |
| ೨........ | ೧೬...... | ೨೯ .. .... |
| ೩........ | ೧೭........ | ೩೦........ |
| ೪........ | ೧೮........ | ೩೧........ |
| ೫........ | ೧೯........ | ೩೨........ |
| ೬........ | ೨೦........ | ೩೩.... ... |
| ೭........ | ೨೧........ | ೩೪........ |
| ೮...... | ೨೨........ | ೩೫.... ... |
| ೯........ | ೨೩........ | ೩೬........ |
| ೧೦........ | ೨೪........ | ೩೭........ |
| ೧೧........ | ೨೫........ | ೩೮ ....... |
| ೧೨........ | ೨೬........ | ೩೯........ |
| ೧೩........ | ೨೭........ | ೪೦........ |
| ೧೪........ | | |

ಸಹಿ, ವಿಳಾಸ. (ತಿಳಿಯುವಂತೆ ಬರೆಯಿರಿ)



# ನಾಗರಿಕ ನಡವಳಿಕೆ

ಅಚ್ಚುಮೆಚ್ಚಾದ ಜವಳಿ ಎಂದರೆ ಮೈಸೂರು ರೇಷ್ಮೆಗಳು. ಮೋಹಕರವಾದ ಈ
ಸನಗುಗಳು ಶೇಕಡ 100 ರಷ್ಟು ಸ್ವಚ್ಛ ರೇಷ್ಮೆಯಿಂದಲೇ ತಯಾರಾಗಿವೆ
ಇದನ್ನು ಯಾವ ಕೆಲಸಕ್ಕೆ ಬೇಕಾದರೂ ಉಪಯೋಗಿಸಿ. ಇತರ
ರೇಷ್ಮೆ ವಸ್ತ್ರಗಳು ಬಾಳಿಕೆ, ಬರುವುದಕ್ಕಿಂತಲೂ
ದೀರ್ಘಕಾಲ ಬಾಳಿಕೆ ಬರುತ್ತದೆ.

## ಮೈಸೂರು ಸಿಲ್ಕುಗಳು

ಚಿತ್ರವಿಚಿತ್ರವಾದ ನಕ್ಷೆಗಳಿಂದ ಕೂಡಿರುವ
ವಿಥವಿಥವಾದ ಬಣ್ಣಗಳಿಂದ ದೊರಕುತ್ತವೆ.

**ಗೌವರ್ನಮೆಂಟ್ ಸಿಲ್ಕ್ ವೀವಿಂಗ್ ಫ್ಯಾಕ್ಟರಿ,**
**ಮೈಸೂರು.**

# ರಾಮರಾಜ್ಯ

( ೧ )

**ಅಧಿಕಾರಿ:**—ಏನಿರಯ್ಯಾ ಗಲಾಟೆ, ಅದು?"

"ಸ್ವಾಮೀ, ನಾವು ನಿರಾಶ್ರಿತರು—ಇಲ್ಲಿ ಗುಡಿಸಲು ಹಾಕಿಕೊಳ್ಳೋಣ ವೆಂದರೆ ಇವರು ಬಂದು ಕೂಡದೆಂದು ಜಗಳವಾಡುತ್ತಾರೆ "

"ಯಾವ ನಿರಾಶ್ರಿತರು ನೀವು?"

**ಒಬ್ಬ:**—ನಾನು ಪೂರ್ವ ಬಂಗಾಳಿ"

**ಇನ್ನೊಬ್ಬ:**—"ನಾನು ಪಶ್ಚಿಮ ಪಂಜಾಬಿ"

**ಬಂಗಾಳಿ:**—"ನನ್ನ ತಂದೆ ತಾಯಿಗಳು ಕ್ಷಾಮದಲ್ಲಿ ಸತ್ತರು. ದೇಶವು ಭಾಗವಾದಾಗ ನಡೆದ ಗಲಭೆಯಲ್ಲಿ ಅಣ್ಣತಮ್ಮಂದಿರಳಿದರು. ಅಕ್ಕ ತಂಗಿ ಯರನ್ನು ಮುಸಲರು ಕೊಂಡೊಯ್ದರು."

**ಪಂಜಾಬಿ:**—"ನನ್ನ ಅಣ್ಣತಮ್ಮಂದಿರು ಸೈನ್ಯಕ್ಕೆ ಸೇರಿದ್ದರು. ಯುದ್ಧ ದಲ್ಲಿ ಮಡಿದರು. ತಂದೆ ತಾಯಿಗಳನ್ನು ಸ್ವಾತಂತ್ರ್ಯ ಬಂದಾಗ ಮುಸಲ್ಮಾ ನರು ಕೊಂದರು. ಹೇಗೋ ನಾನು ತಪ್ಪಿಸಿಕೊಂಡು ಬಂದೆ."

**ಇಬ್ಬರೂ:**—"ನಮಗೆ ಬೇರೆ ಗತಿಯಿಲ್ಲ. ಇಲ್ಲಿಯೇ ಗುಡಿಸಿಲು ಹಾಕಿ ಕೊಂಡು ಜೀವನ ನಡೆಸಿಕೊಳ್ಳುತ್ತೇವೆ. ದಯಮಾಡಿ ಅಪ್ಪಣೆ ಕೊಡಿ"

**ಅಧಿಕಾರಿ:**—"ಆಗದಾಗದು. ಇದು ಮಸೀತಿಗೆ ಹತ್ತಿರದ ಜಾಗ. ಇಲ್ಲಿ ನೀವು ಗುಡಿಸಿಲು ಕಟ್ಟಕೂಡದು. ಸರ್ಕಾರಕ್ಕೆ ಬರೆದುಕೊಳ್ಳಿ—ಬೇರೆ ಏರ್ಪಾಡು ಮಾಡುವರು."

ಅವರೆಷ್ಟು ಅಂಗಲಾಚಿದರೂ ಹಾಕುತ್ತಿದ್ದ ಗುಡಿಸಲುಗಳನ್ನು ನೆಲಸಮ ಮಾಡಿಸುವನು. ನಿರಾಶ್ರಿತರಿಬ್ಬರು ಶೋಕಿಸುತ್ತ ನಡೆಯುವರು—ಪ್ರಜಾ ರಾಜ್ಯದಲ್ಲಿ."

( ೨ )

**ಗುಮಾಸ್ತೆ:**—"ನಿನಗೇನಯ್ಯಾ ಬೇಕು? ಬೇಗ ಹೇಳು"

**ಯೌವನಕಳೆದ ಯುವಕ:**—ಸ್ವಾಮೀ, ನನ್ನದೊಂದು ಅರ್ಜಿಇತ್ತು ..."

"ಯಾವುದಕ್ಕೆ ಅರ್ಜಿ?"

"ಏನಾದರೊಂದು ಕೆಲಸಕ್ಕೆ"

"ಕೆಲಸವೆ? ಕೆಲಸವೆಲ್ಲಿದೆ? ಹೋಗು, ಹೋಗು!"

ಸ್ವಾಮಿ, ಬೇರೆ ಗತಿಯಿಲ್ಲ. ನಲವತ್ತೆರಡನೆ ಇಸ್ವಿಯಲ್ಲಿ ಚಳುವಳಿಗೆ ಸೇರಿ ಓದನ್ನು ಬಿಟ್ಟು ಬಿಟ್ಟು ಜೈಲಿಗೆ ಹೋಗಿದ್ದೆ. ಲೋವರ್ ಸೆಂಡರಿವರಿಗೂ ಓದಿದ್ದೆ. ಇಷ್ಟು ದಿನ ನಮ್ಮಪ್ಪ ಇದ್ದ. ಮೊನ್ನೆ ಅವನು ತೀರಿಕೊಂಡ. ನಮ್ಮಣ್ಣ ಅದೇ ಚಳುವಳಿಯಲ್ಲಿ ಗುಂಡಿನೇಟಿನಿಂದ ಸತ್ತುಹೋದ. ಮನೆಯಲ್ಲಿ ಮುದಿ ತಾಯಿ, ಮಕ್ಕಳು, ಮರಿ. ಎಲ್ಲರಿಗೂ ನಾನೇ ಹಿಟ್ಟು ತೋರಿಸಬೇಕು. ಏನಾದರೂ ಕೆಲಸ ಕೊಡಿರೆಂದು ಮಂತ್ರಿಗಳಿಗೆ ಅರ್ಜಿ ಹಾಕಿದ್ದೇನೆ."

"ಹಾಗಾದರೆ ಮಂತ್ರಿಗಳನ್ನೇ ನೋಡು ಹೋಗು"

"ಇಪ್ಪತ್ತು ದಿವಸ ಅವರ ಮನೆ ಮುಂದೆ ಕಾದೆ. ಕಾಣಲು ಆಗಲಿಲ್ಲ. ಆಫೀಸಿನಲ್ಲಿ ನೋಡು ಎಂದರು, ಇಲ್ಲಿ ಬಂದೆ ..."

"ಮಂತ್ರಿಗಳನ್ನು ನೋಡಲು ಈಗ ಆಗುವುದಿಲ್ಲ........ಯಾವಜಾತಿ ನಿನ್ನದು?"

"ಜಾತಿ ಯಾವುದಾದರೇನು ಸ್ವಾಮಿ? ಸ್ವಾತಂತ್ರ್ಯ ಸಮರದಲ್ಲಿ ಭಾಗ ವಹಿಸಿದ ಬಡ ಭಾರತೀಯರಲ್ಲೊಬ್ಬ ನಾನು."

"ಆ ಪುರಾಣವೆಲ್ಲ ಇರಲಿ, ಇಲ್ಲಿ ಈಗ ಪ್ರಜಾ ಸರ್ಕಾರ. ಕೋಮುವಾರು ಲೆಕ್ಕದ ಮೇಲೆಯೇ ಕೆಲಸಕ್ಕೆ ಸೇರಿಸಿಕೊಳ್ಳುವುದು....ನಿನ್ನನ್ನು ನೋಡಿದರೆ ಕೆಲಸ ಸಿಗಬಹುದಾದಂಥ ಕೋಮಿನವನಂತೆ ಕಾಣುವುದಿಲ್ಲ! ಹೋಗಲಿ, ನಿನ್ನ ಅರ್ಜಿಯನ್ನು ಮೇಲಕ್ಕೆ ಕಳುಹಿಸುತ್ತೇನೆ—ಏನಾದರೂ ತಂದಿದೀಯಾ ಶಾಖಾಯ ಲವಣಾಯ ?"

"ನನ್ನಲ್ಲಿ ಮೂರುಕಾಸೂ ಇಲ್ಲವಲ್ಲ ಸ್ವಾಮಿ!"

**ಗುಮಾಸ್ತೆ** :—(ಕೋಪದಿಂದ) "ಏನಯ್ಯಾ, ನಮ್ಮ ಕಾಲವನ್ನು ವೃಥಾ ಕಳೆಯುವದಕ್ಕೆ ಬಂದಿದೀಯೆ! ನಿನ್ನ ವಿಳಾಸವನ್ನು ಕೊಟ್ಟುಹೋಗು, ನಿನ್ನ ಅರ್ಜಿಗೆ ಉತ್ತರ ಬರುವುದು"

ಯೌವ್ವನಕಳೆದ ಯುವಕನು ನಿರಾಶನಾಗಿ ಹಿಂತಿರುಗುವನು, ಪ್ರಜಾ ರಾಜ್ಯದಲ್ಲಿ.

( ೩ )

**ವರ್ತಕ**:—ಸಾಮಾನಿಗೆಲ್ಲಾ ಮೂವತ್ತೆರಡು ರೂಪಾಯಿ, ಮೇಲೆ ತೆರಿಗೆ ಎಂಟಾಣೆ—ಎಲ್ಲಾ ಮೂವತ್ತೆರಡೂವರೆ!"

**ರೈತ**:—ಅಯ್ಯಾ, ಮೇಲೇತಕ್ಕೆ ಎಂಟಾಣೆ?"

"ಏನು, ತಿಳಿಯದವನಂತೆ ಕೇಳುತ್ತೀಯೆ? ಮಾರಾಟದ ತೆರಿಗೆಯಲ್ಲವೆ?"

"ಮಾರಾಟದ ತೆರಿಗೆಯನ್ನು ನಾನೇತಕ್ಕೆ ಕೊಡಬೇಕು? ಮಾರುವವರು ನೀವು. ನಾನು ಕೊಳ್ಳುವವನಲ್ಲವೆ?"

"ಚೆನ್ನಾಗಿ ಹೇಳಿದೆ. ತೆರಿಗೆಯನ್ನು ನಮ್ಮ ಲಾಭದಲ್ಲಿ ಕೊಡು ಎನ್ನು ವಿಯಾ? ನಮ್ಮ ಪ್ರಜಾ ಸರ್ಕಾರವು ಹಾಕಿರುವ ತೆರಿಗೆ ಮಾರಾಟದ ತೆರಿಗೆ ಯೆಂದು ಹೇರಿದ್ದರೂ, ಕೊಳ್ಳುವವರೇ ಕೊಡಬೇಕು. ಇವೆಲ್ಲಾ ಬಡ ರೈತರ ಏಳಿಗೆಗಾಗಿ ಹಾಕಿರುವ ತೆರಿಗೆಯಪ್ಪಾ."

"ಅಯ್ಯೋ, ನಾನೂ ಒಬ್ಬ ಬಡರೈತ. ಪ್ರತಿಯೊಂದು ಸಾಮಾನನ್ನೂ ಕೊಳ್ಳುವವನು. ಈ ಏಳಿಗೆಯ ಭಾರವು ನಮ್ಮ ಸೊಂಟವನ್ನೇ ಮುರಿಯುತ್ತಿದೆ. ಏಳಿಗೆಗೆ ಬದಲು, ಬೀಳಿಗೆಯಾಗಿದೆ.. ಹೋಗಲಿ ಬಿಡು.ಒಂದು ಕಟ್ಟು ಬೀಡಿ ಕೊಡು."

"ಮೂರಾಣೆ ಕೊಡು."

"ಇದೇನು ಇಷ್ಟು ದಿವಸ ಎರಡಾಣೆ ಇತ್ತಲ್ಲಾ"

"ಈಗ ಬೀಡಿಯಮೇಲೆ ಸರ್ಕಾರದ ಹೊಸ ಸುಂಕವಿದೆ"

"ಕೆಟ್ಟೆ ನಾನು. ಕೇಳು ಸಾಹುಕಾರಯ್ಯ : ಸಾಮಾನು ಕೊಂಡು ಹೋಗುವುದಕ್ಕೆಂದು ಊರಿನಿಂದ ರೈಲಿನಲ್ಲಿಯೇ ಬರೋಣವೆಂದು ಹೊರಟರೆ, ಛಾರ್ಜು ಮೈಲಿಗೊಂದುಕಾಸಿನಂತೆ ಜಾಸ್ತಿ ಕೊಡು ಎಂದರು. ಸಾಮಾನಿಗೆ ಕಡಿಮೆಯಾದೀತೆಂಬ ಭಯದಿಂದ ನಡೆದೇ ಬಂದೆವು. ರಾತ್ರಿ ಹೋಟಲಿನಲ್ಲಿ ಊಟಕ್ಕೆ ಹೋದರೆ, ಎಂಟಾಣೆಯಿಂದ ಹನ್ನೆರಡಾಣೆ ಮಾಡಿದ್ದರು—ಆಹಾರ ಪದಾರ್ಥದ ಬೆಲೆ ಸರ್ಕಾರ ಹೆಚ್ಚಿಸಿದ್ದಾರೆಂದು. ಹೋಗಲಿ ಎಂದು ಕೊಟ್ಟರೆ, ಅನ್ನಕ್ಕೆ ಬದಲಾಗಿ ಜೋಳವನ್ನಿಕ್ಕಿದರು ಊಟಕ್ಕೆ! ಏನೋ ಪಟ್ಟಣಕ್ಕೆ ಬಂದೆ ವೆಲ್ಲಾ ಒಂದು ಸಿನಿಮಾ ಆಟ ನೋಡಿ ಕಷ್ಟಗಳನ್ನು ಸ್ವಲ್ಪ ಹೊತ್ತಾದರೂ ಮರೆ ಯೋಣವೆಂದು ಹೋದರೆ, ತಲೆಗೆ ಎರಡಾಣೆ ಹೆಚ್ಚುಕೊಡು ಹೊಸತೆರಿಗೆ ಹಾಕುತ್ತಾರೆ ಎಂದರು! ಈಗ ನೀವೋ ಮಾರಾಟದ ತೆರಿಗೆ ಕೊಡು ಎಂದಿರಿ. ಕಡೆಗೆ ನನಗೊಂದೇ ಸುಖವಿದ್ದದ್ದು ಜೀವನದಲ್ಲಿ—ದಿನಕ್ಕೊಂದು ಕಟ್ಟು ಬೀಡಿ. ಈಗ ಅದಕ್ಕೂ ಹೆಚ್ಚು ತೆರಿಗೆ! ಎಲ್ಲಾ ನಮ್ಮ ಏಳಿಗೆಗೆ! ಈ ಏಳಿಗೆ ಗಿಂತ ವಿಷ ತೆಗೆದುಕೊಳ್ಳುವುದು ಮೇಲು!"

ವರ್ತಕ:—"ಹಾಗೆಲ್ಲಾದರೂ ಮಾಡೀಯೆ, ಜೋಕೆ! ಪೋಲೀಸಿನವರು ಬಂದು ಹಿಡಿದುಕೊಳ್ಳುತ್ತಾರೆ! ಆತ್ಮಹತ್ಯ ಮಾಡಿಕೊಳ್ಳುವುದಕ್ಕೆ ನಿನಗೇನು

ಹಕ್ಕು? ಈ ನಮ್ಮ ಪ್ರಜಾ ಸರ್ಕಾರದಲ್ಲಿ ನಿನ್ನ ಜೀವ ದೇಶಕ್ಕೆ ಸೇರಿದದು, ನಿನ್ನ ಸ್ವಂತದ್ದಲ್ಲ!"

ರೈತನು ಹಣೆ ಚಚ್ಚಿಕೊಳ್ಳುತ್ತಾ ಹೋಗುವನು—ಪ್ರಜಾ ರಾಜ್ಯದಲ್ಲಿ.

( ೪ )

ಪೋಲೀಸಿನವನು :—ಯಾರು ನೀವೆಲ್ಲಾ? ಇಲ್ಲೇಕೆ ಗುಂಪು ಕೂಡಿದ್ದೀರಿ?"

ಭಾಷಣಕಾರ :—ಅಯ್ಯಾ, ಅವರು ನನ್ನ ಭಾಷಣ ಕೇಳಲು ಬಂದಿದ್ದಾರೆ"

"ಭಾಷಣವೆ? ಯಾವ ಭಾಷಣ? ತಿಳಿಯದೆ ಈಗ ಇಲ್ಲಿ ಜಾರಿಯಲ್ಲಿರುವ ಕಾನೂನು? ಈ ಪ್ರಾಂತ್ಯದಲ್ಲಿ ಯಾರೂ ಭಾಷಣ ಮಾಡಲು ಕೂಡದು. ಎಲ್ಲರೂ ಬೇಗ ಹೊರಡಿ."

"ಅಯ್ಯಾ, ನಾನು ಸ್ವಾತಂತ್ರ್ಯದ ಹೋರಾಟದ ದಿನಗಳಿಂದಲೂ ರಾಜಕೀಯ ಭಾಷಣಗಳನ್ನು ಮಾಡಿ ಜನಗಳನ್ನು ಜಾಗೃತಿಗೊಳಿಸುತ್ತಿದ್ದೇನೆ. ಆಗಿನ ಪರಕೀಯ ಸರಕಾರವಂತೂ ನಮ್ಮ ಬಾಯಿ ಮುಚ್ಚುತ್ತಿತ್ತು. ಈಗ ನಮಗೆ ಸ್ವಾತಂತ್ರ್ಯ ಬಂದಿದೆ. ನಾನು ಭಾಷಣ ಮಾಡಲು ಸಿದ್ಧನಿದ್ದೇನೆ—ಇವರೆಲ್ಲಾ ಕೇಳಲು ಕುತೂಹಲರಾಗಿದ್ದಾರೆ ...

"ನಿನ್ನನ್ನು ನೋಡಿದರೆ ಸಮತಾವಾದಿಯೋ, ಕಮ್ಯೂನಿಸ್ಟೋ ಅಥವಾ ಮತ್ತ್ಯಾವುದಾದರೊಂದು ಭಯಂಕರ ಚಳುವಳಿಗಾರನೋ ಇದ್ದ ಹಾಗೆ ಕಾಣುತ್ತಿ! ನಿನ್ನನ್ನು ದಸ್ತಗಿರಿಮಾಡಿದ್ದೇನೆ! ನಡೆ ನನ್ನ ಜತೆಯಲ್ಲಿ!"

"ಅಯ್ಯಾ, ಈಗ ನಮಗೆ ವಾಕ್ಸ್ವಾತಂತ್ರ್ಯವುಂಟು ಈ ಪ್ರಜಾ ಸರ್ಕಾರದಲ್ಲಿ...."

"ಅದೆಲ್ಲಾ ಕೋರ್ಟಿನಲ್ಲಿ ಬೊಗಳು, ನನ್ನ ಮುಂದೆ ಬೇಡ—"

"ಒಂದುವೇಳೆ ಕೋರ್ಟಿನವರು ನನ್ನನ್ನು ತಪ್ಪಿತಸ್ಥನಲ್ಲವೆಂದು ಬಿಟ್ಟು ಬಿಟ್ಟರೆ...."

"ಅಹಹ! ನಮಗೆ ಗೊತ್ತಿಲ್ಲವೆ? ಅದಕ್ಕೆ ನಾವು ಮೊದಲೇ ಬಂದೋಬಸ್ತು ಮಾಡಿ ಮತ್ತೊಂದು ಆಜ್ಞೆ ಜೇಬಿನಲ್ಲಿಟ್ಟುಕೊಂಡೇ ನಿನ್ನನ್ನು ನ್ಯಾಯಾಸ್ಥಾನಕ್ಕೆ ಕಳುಹಿಸುತ್ತೇವೆ! ನೀನು ತುಂಬಾ ಕೆಟ್ಟ ಕ್ರಾಂತಿಕಾರನಂತೆ ಕಾಣುತ್ತಿ...."

ಕಾರಾಗೃಹಕ್ಕೆ ಎಳೆದುಕೊಂಡೇ ಹೋಗುವನು—ಪ್ರಜಾ ರಾಜ್ಯದಲ್ಲಿ.

"ಪ್ರಿಯೆ, ಈ ಬೆಳದಿಂಗಳು ಬಹು ರಮ್ಯವಾಗಿದೆಯಲ್ಲವೆ?"

"ಪ್ರಿಯಾ, ಅಹುದು, ಆನಂದಕರವಾಗಿದೆ."

"ಮಂದಮಾರುತವು ಬಹಳ ಹಿತಕರವಾಗಿದೆಯಲ್ಲವೆ?"

"ಹೌದು, ಬೇಸಿಗೆಯ ತಾಪಕ್ಕೆ ಬಹಳ ಹಿತಕರವಾಗಿದೆ!"

"ಆಕಾಶವನ್ನು ನೋಡು, ಅದರ ನೀಲಿಯು ಎಷ್ಟು ಪ್ರಶಾಂತವಾಗಿದೆ."

"ಪ್ರಿಯಾ, ಅಹುದು, ಬಹಳ ಪ್ರಶಾಂತತೆಯಿಂದಿದೆ."

"ಪ್ರಿಯೆ, ಹಾಗಾದರೆ, ಇನ್ನೂ ಸ್ವಲ್ಪಹೊತ್ತು ಇಲ್ಲಿಯೇ ವಿಹರಿಸೋಣವೆ?"

"ವಿಹರಿಸೋಣ, ಪ್ರಿಯಾ! ಈ ನಮ್ಮ ಪ್ರಜಾ ಸರ್ಕಾರದಲ್ಲಿ ಈ ತಿಳಿ ನೀಲಿ ಗಗನವನ್ನು ನೋಡಿ ಆನಂದಿಸುವುದಕ್ಕಾಗಲಿ, ಆಹ್ಲಾದಮಯ ಚಂದ್ರ ಕಾಂತಿಯನ್ನನುಭವಿಸುವುದಕ್ಕಾಗಲಿ, ಸುಳಿವ ಮಂದಮಾರುತಕ್ಕೆ ಮೈತೆತ್ತು ಹಿತವರಿತು ಸುಖಪಡುವುದಕ್ಕಾಗಲಿ, ಈ ನಮ್ಮ ಸತಿ-ಪತಿಯರ ಅನ್ಯೋನ್ಯ ವಿಹಾರಕ್ಕಾಗಲಿ ಯಾವ ಕಟ್ಟೂ, ಯಾವ ಅಪ್ಪಣೆಯೂ, ಯಾವ ತೆರಿಗೆಯೂ ಸಹ ಇನ್ನೂ ಇಲ್ಲವಷ್ಟೆ!"

"ಪ್ರಿಯೇ, ಅಹುದಹುದು, ನಾವೇ ಧನ್ಯರು! ಇದೆಲ್ಲಾ ನಾವು ಹೋರಾಡಿ ಗಳಿಸಿದ ಸ್ವಾತಂತ್ರ್ಯದ ಸುಫಲ! ಸ್ವರಾಜ್ಯದ ಫಲ! ಇದುವೆ ಸುರಾಜ್ಯ! ರಾಮರಾಜ್ಯ!!"

ನಿರಾತಂಕವಾಗಿ ವಿಹರಿಸುವರು—ರಾಮರಾಜ್ಯದಲ್ಲಿ.

——— o ———

"ಕತ್ತರಿ ಕಳೆದು ಹೋಗಿದೆ; ಹಿಂದಕ್ಕೆ ತಂದುಕೊಟ್ಟವರಿಗೆ ೫೦೦ ರೂ. ಬಹುಮಾನ"—ದರ್ಜಿ. (ಪತ್ರಿಕೆ ಜಾಹೀರಾತು)

—೫೦೦ ರೂಪಾಯಿ ಬೆಲೆ ಬಾಳುವುದಾದರೆ ಅದು ಸ್ವತಂತ್ರ ಕತ್ತರಿ ಇರಬೇಕು. ಅದೇ ಬಟ್ಟೆಯನ್ನು ಕೋಟಿನ ರೂಪಕ್ಕೆ ಕತ್ತರಿಸಲು ಕಲಿತಿದ್ದಿರಬೇಕು ಅಲ್ಲವೇ?

* * *

## ಮಹಿಳೆಯರ ರೇಷ್ಮೆ ಉಡಿಗೆ ತೊಡಿಗೆಗಳಲ್ಲಿ ಪ್ರವೀಣತೆ



ನವಿಲಿನಂತೆ ಬಿನ್ನಾಣ
ಲಾವಣ್ಯದಿಂದಿರಬೇಕಾದರೆ



ಮಲ್ಲಿಗೆ ಜಡೆಯಂತೆ
ಮನಮೋಹಕವಾಗಿರಬೇಕಾದರೆ

ಅತ್ಯುತ್ತಮವೆನ್ನಬೇಕಾದರೆ




**ನಮ್ಮಲ್ಲಿಗೆ ತಪ್ಪದೆ ಬನ್ನಿ**

ಭಾರತದಲ್ಲೆಲ್ಲಾ ಸುರುಚಿ, ಸುಸಂಸ್ಕೃತಿಯವರೆಲ್ಲರೂ ಮೆಚ್ಚಿರುವಂತಹ

# ಸೀತಾಲಕ್ಷ್ಮಿ ಹಾಲ್

**ಚಿಕ್ಕಪೇಟೆ - - ಬೆಂಗಳೂರು ಸಿಟಿ**

ಪ್ರೊ. ಕೆ. ಶ್ರೀನಿವಾಸಲು. ಫೋನ್ : 3110

K.A.S.

**ಮಕ್ಕಳಿಗೆ ಆಟದ ಸಾಮಾನುಗಳನ್ನು ಕೊಡುವಾಗ**



ಸಾಮಾನು

ಆಡುವಂತಹುದನ್ನು

ಕೊಡುವುದಕ್ಕಿಂತ

ಮಗು ಆಡುವಂತಹುದನ್ನು

ಕೊಡುವುದು

ಒಳ್ಳೆಯದು




ಹಾಗೆಯೇ ಬಲ್ಬುಗಳನ್ನು ಕೊಳ್ಳುವಾಗ
ಓದುಬರಹವೆಲ್ಲಾ ಆಟದಂತಾಗಬೇಕಾದರೆ

ಕಣ್ಣಿಗೆ ಕಷ್ಟವಾಗದೆ—
ಕಾಸಿಗೆ ನಷ್ಟವಾಗದೆ ಇರಬೇಕಾದರೆ

# ಮೈಸೂರು ಲ್ಯಾಂಪ್ಸ್ ನ್ನೇ

**ಕೊಳ್ಳಿರಿ.**

K A.S.

ಬೆಂಗಳೂರು **ಗೀತಾ** ಮತ್ತು **ಶ್ರೀ**

ದಾವಣಗೆರೆ **ಅಶೋಕ** ಚಿತ್ರಮಂದಿರಗಳಲ್ಲಿ

ಈಗ ಪ್ರದರ್ಶಿತವಾಗುತ್ತಿದೆ



ವಿಜಯ ರವರ

# ಪಾತಾಳಭೈರವಿ

ನಿರ್ದೇಶಕರು... K.V. ರೆಡ್ಡಿ, B.Sc (HONS)

*Produced by*.. NAGIREDDI & CHAKRAPANI

**13-4-51** ರಿಂದ ಪ್ರಾರಂಭ

ಮೈಸೂರು ರಾಜಕಮಲ್ ಚಿತ್ರಮಂದಿರಗಳಲ್ಲಿ

Vijaya Talkie Distributors Release.

ಶ್ರೀಯುತರೆ :

"ದೋಭಿ ಪಟಕ್" ಎಂಬ ಕುಸ್ತಿಯ ಪಟ್ಟೊಂದರ ಹೆಸರನ್ನು ಕೇಳಿದ್ದೀರಲ್ಲವೇ? ಘಟ್ಟಿ ಗಡಿತವಾದ ಎದುರಾಳಿಯನ್ನು ಮಣ್ಣು ಮುಕ್ಕಿಸಲು ಇದೊಂದು ಹೆಸರಾಂತ ಪಟ್ಟು. ಇದರಲ್ಲಿ ದೋಭಿ ಬಟ್ಟೆ ಒಗೆದಹಾಗೆ ಎದುರಾಳಿಯನ್ನು ಎತ್ತಿ ಕುಕ್ಕುವುದು.

ಬಟ್ಟೆಗಳನ್ನು ಹೀಗೆ ಒಗೆದರೆ ಬಟ್ಟೆ ಬರೆಬರೆಯಾಗೋದು, ಅಲ್ಪಾಯುಸ್ಸಾಗೋದು ಸ್ವಾಭಾವಿಕವಲ್ಲವೇ?

ಬಟ್ಟೆಗಳನ್ನು ಶುಭ್ರಗೊಳಿಸಲು ಇದೊಂದೇ ಮಾರ್ಗವೇ?

ವೈಜ್ಞಾನಿಕರ ಪ್ರಯೋಗಗಳಿಂದಾಗಿ, ಎಲೆಕ್ಟ್ರಿಕ್ ರೋಟರಿ ಯಂತ್ರಗಳು—ಹೈಡ್ರೋ ಎಕ್ಸ್‌ಟ್ರಾಕ್ಟರ್ಸ್‌ಗಳೂ—ಡ್ರೈಯಿಂಗ್ ಟಂಬ್ಲರುಗಳೂ ನಿರ್ಮಿಸಲ್ಪಟ್ಟಿವೆ. ಇಂತಹ ಯಂತ್ರಗಳಿಂದ ಬಟ್ಟೆಗಳನ್ನು ಅವು ಸುಸ್ಥಾಗದಂತೆ ಶುಭ್ರಮಾಡಲು ಬಲು ಸುಲಭ. ಹಾಗೂ ಬಲು ಬೇಗ ಮಾಡಬಹುದು. ಅಲ್ಲದೆ (ದೋಭಿ ಕಜ್ಜಿ ಮುಂತಾದ) ಸಾಂಕ್ರಾಮಿಕ ಕ್ರಿಮಿಗಳು ನಿರ್ಮೂಲವಾಗಿ ಒಬ್ಬರ ಬಟ್ಟೆಗಳಿಂದ ಇನ್ನೊಬ್ಬರ ಬಟ್ಟೆಗಳಿಗೆ ಬರದಂತಾಗುವುದು.

ಅಂದರೆ ಬಟ್ಟೆಗಳನ್ನು ಬೇಗ ಶುಭ್ರಗೊಳಿಸಿ, ಸಾಂಕ್ರಾಮಿಕ ಕ್ರಿಮಿಗಳನ್ನು ನಿರ್ಮೂಲಮಾಡಿ, ಬಟ್ಟೆಯ ಘಟ್ಟಿ ಗಡತವು ಹಾಳಾಗದಂತೆ ಕಾಪಾಡಲು ಈ ಯಂತ್ರಗಳು ಅತ್ಯುತ್ತಮ. ಅಂತಹ ಯಂತ್ರಗಳನ್ನು ನಮ್ಮ ಬೆಂಗಳೂರಿನಲ್ಲಿ ನಾವೇ ಮೊದಲು ಸ್ಥಾಪಿಸುತ್ತಿರುವುದು.

ಸಂಸಾರಗಳಿಗೂ, ಆಸ್ಪತ್ರೆಗಳಿಗೂ, ಪೋಲೀಸ್ ಸಮೂಹಗಳಿಗೂ, ವಿದ್ಯಾರ್ಥಿ ನಿಲಯಗಳಿಗೂ, ನಾವು ಸೇವೆ ಸಲ್ಲಿಸಲು ಕಂಕಣ ತೊಟ್ಟಿದ್ದೇವೆ.

ನಿಮ್ಮಿಂದ ಬಟ್ಟೆಗಳನ್ನು ತರುವುದಕ್ಕೂ ತಿರುಗಿ ಕಳಿಸುವುದಕ್ಕೂ ವ್ಯವಸ್ಥೆಯನ್ನು ಮಾಡುತ್ತೇವೆ.

——— ವಿವರಗಳಿಗೆ ಪತ್ರ ಬರೆಯಿರಿ

ನಿಮ್ಮ ಸೇವಾಕಾಂಕ್ಷಿಗಳು :

# ಸ್ನೋವೈಟ್ ಲ್ಯಾಂಡರರ್ಸ್

## ಪ್ರೊ॥ ಭಗವಾನ್‌ದಾಸ್ ಶ್ಯಾಮಸುಂದರ್ ಮತ್ತು ಕಂಪೆನಿ

**ಕಮರ್ಷಿಯಲ್ ಸ್ಟ್ರೀಟ್—ಬೆಂಗಳೂರು.** K.A.S.

ನಿಮ್ಮ ಯುಗಾದಿಯ ಬೆಳಗಿನಝಾವ ಒಂದು ಬಟ್ಟಲು
ಇಂಡಿಯನ್ ಕಾಫೀಯಿಂದ ಶುರುವಾಗಲೀ !

ಹಬ್ಬದೂಟವಾದಮೇಲೆ, ಸಂತುಷ್ಟಿಯನ್ನು ಸಂಪೂರ್ಣಗೊಳಿಸಲು
ಒಂದು ಬಟ್ಟಲು ಇಂಡಿಯನ್ ಕಾಫೀಯನ್ನು ಕುಡಿಯಲಿ !

ಹಬ್ಬದ ಸಲುವಾಗಿ ಕೆಲಸಗೈದು ಬಳಲಿದ ಮಹಿಳೆಯರು ಒಂದು ಬಟ್ಟಲು
ಇಂಡಿಯನ್ ಕಾಫೀ ಕುಡಿದು ನವಯೌವನ ಪಡೆಯಲಿ !



ಅತಿಥಿ ಅಭ್ಯಾಗತರು ನಿಮ್ಮಲ್ಲಿ ಒಂದು ಬಟ್ಟಲು ಇಂಡಿಯನ್ ಕಾಫಿ
ಕುಡಿದು ನಲಿಯಲಿ !

ಖರ ಸಂವತ್ಸರದಲ್ಲಿ ನಿಮಗೆ ದಣುವಾರಿಸಲು, ಸ್ಫೂರ್ತಿಗೊಳಿಸಲು
ಇಂಡಿಯನ್ ಕಾಫಿ ಕೈನೆರವಾಗಿರಲಿ

## ಎಲ್ಲರಿಗೂ ಸನ್ಮಂಗಳವಾಗಲಿ

ಮನಸಾರೆ ಹಾರೈಸುವ

# ಇಂಡಿಯನ್ ಕಾಫಿ ಬೋರ್ಡ್

K A.S.





Mysore is the land of natural beauty and grandeur, whose frontiers enclose the most salubrious and bracing health resorts in India Historic edifices and landmarks, mighty forests teeming with game, rugged mountains, lovely waterfalls and other features of scenic beauty invite your interest Hotel accommodation is the best and most modern available



Cover Printed at the Hosali Press 38-A, Mahatma Gandhi Road Bangalore